


# ಹಂಪಿ ಕನ್ನಡ ವಿಶ್ವವಿದ್ಯಾಲಯ



## "ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳು ಸಾಮಾಜಿಕ ಮೌಲ್ಯ ವಿಶ್ಲೇಷಣೆ"

ಹಂಪಿ ಕನ್ನಡ ವಿಶ್ವವಿದ್ಯಾಲಯ
ಎಂ.ಫಿಲ್ ನಿಬಂಧ

**ಸಂಶೋದಕರು: ಶಬೀನಾ**
**ನೋಂದಣಿ ಸಂಖ್ಯೆ :೧೪೨೦೦೧೦೩೦೦೪೪**

**ಮಾರ್ಗದರ್ಶಕರು:**
**ಡಾ.ಶೀಲಾದೇವಿ ಎಸ್ ಮಳೀಮಠ**
ಕನ್ನಡ ವಿಭಾಗದ ಮುಖ್ಯಸ್ಥರು
ಬಿ.ಎಂ.ಎಸ್ ಮಹಿಳಾ ವಿದ್ಯಾಲಯ,
ಬಸವನಗುಡಿ, ಬೆಂಗಳೂರು - ೫೬೦೦೦೪

**ಕನ್ನಡ ಸಾಹಿತ್ಯ ಪರಿಷತ್ತು**
ಚಾಮರಾಜಪೇಟೆ, ಬೆಂಗಳೂರು - ೫೬೦೦೧೮




೨೦೧೪-೧೫




# ಹಂಪಿ ಕನ್ನಡ ವಿಶ್ವವಿದ್ಯಾಲಯ





## "ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳು ಸಾಮಾಜಿಕ ಮೌಲ್ಯ ವಿಶ್ಲೇಷಣೆ"

ಹಂಪಿ ಕನ್ನಡ ವಿಶ್ವವಿದ್ಯಾಲಯ
ಎಂ.ಫಿಲ್ ನಿಬಂಧ

**ಸಂಶೋದಕರು: ಶಬೀನಾ**
**ನೋಂದಣಿ ಸಂಖ್ಯೆ :೧೪೨೦೦೧೦೩೦೦೪೪**

**ಮಾರ್ಗದರ್ಶಕರು:**
**ಡಾ.ಶೀಲಾದೇವಿ ಎಸ್ ಮಳೀಮಠ**
ಕನ್ನಡ ವಿಭಾಗದ ಮುಖ್ಯಸ್ಥರು
ಬಿ.ಎಂ.ಎಸ್ ಮಹಿಳಾ ವಿದ್ಯಾಲಯ,
ಬಸವನಗುಡಿ, ಬೆಂಗಳೂರು – ೫೬೦೦೦೪



**ಕನ್ನಡ ಸಾಹಿತ್ಯ ಪರಿಷತ್ತು**
ಚಾಮರಾಜಪೇಟೆ, ಬೆಂಗಳೂರು – ೫೬೦೦೧೮




**೨೦೧೪–೧೫**

## ಅಭ್ಯರ್ಥಿಯ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ೨೦೧೪-೧೫ನೇ ಸಾಲಿನಲ್ಲಿ **"ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳು – ಸಾಮಾಜಿಕ ಮೌಲ್ಯ ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು **ಡಾ.ಶೀಲಾದೇವಿ ಎಸ್ ಮಳೀಮಠ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಬಾಗವನ್ನು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 31.07.2015

ಸಂಶೋಧನಾ ವಿದ್ಯಾರ್ಥಿ

ಶಬೀನಾ

ಶಬೀನಾ

## ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ೨೦೧೪–೧೫ನೇ ಸಾಲಿನಲ್ಲಿ **"ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳು – ಸಾಮಾಜಿಕ ಮೌಲ್ಯ ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಶಬೀನಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧವು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೆಂಗಳೂರು

ದಿನಾಂಕ : 31-07-2015

ಮಾರ್ಗದರ್ಶಕರು

ಶೀ ಮಳೀಮಠ
31/7/2015

**ಡಾ.ಶೀಲಾದೇವಿ ಎಸ್ ಮಳೀಮಠ**

ಕನ್ನಡ ವಿಭಾಗದ ಮುಖ್ಯಸ್ಥರು

ಬಿ.ಎಂ.ಎಸ್ ಕಾಲೇಜು, ಬಸವನಗುಡಿ

ಬೆಂಗಳೂರು – ೫೬೦೦೦೪

# "ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳು ಸಾಮಾಜಿಕ ಮೌಲ್ಯ ವಿಶ್ಲೇಷಣೆ"





# ಪರಿವಿಡಿ

# ಅಧ್ಯಾಯ ೦೧

## ಪೀಠಿಕೆ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

ಪ್ರಕೃತಿಯ ಎಲ್ಲಾ ಚರಾಚರ ಜೀವಿಗಳಲ್ಲಿ ಮನುಷ್ಯ ಪ್ರಾಣಿಯು ಶ್ರೇಷ್ಠ ಹಾಗೂ ವಿಭಿನ್ನ ಸ್ವರೂಪವನ್ನು ಹೊಂದಿರುವ ವಿಶಿಷ್ಟ ಜೀವಿಯಾಗಿದ್ದಾನೆ. ತನ್ನ ಆಲೋಚಿಸುವ, ಮಾತನಾಡುವ ಶಕ್ತಿಯಿಂದಾಗಿ ಇತರ ಜೀವಿಗಳಿಗಿಂತ ಭಿನ್ನವಾಗಿದ್ದಾನೆ. ಮನುಷ್ಯನಲ್ಲಿ ಬುದ್ಧಿಶಕ್ತಿ ಬೆಳದಂತೆ ಸುತ್ತಲಿನ ನಿಸರ್ಗ, ಪ್ರಾಣಿ–ಪಕ್ಷಿಗಳ ಜೀವನ ಕ್ರಮ, ಸ್ವಭಾವ, ನಡವಳಿಕೆ ಆತನಲ್ಲಿ ಹೊಸ ಹೊಸ ಭಾವನೆ, ಆಲೋಚನೆಗಳನ್ನು ಪ್ರೇರೇಪಿಸಲು ಕಾರಣವಾಗಿದೆ. ಬಹುಶಃ ಪ್ರಕೃತಿಯನ್ನು ಅನುಕರಿಸಿ ಮಾತನಾಡಲು ಕಲಿತ ಮಾನವ ಮೊದಲು ಸೃಷ್ಟಿಸಿದ ಸಾಹಿತ್ಯ ಮೌಖಿಕ ಮಕ್ಕಳ ಸಾಹಿತ್ಯ. ಕಾಲ ಬದಲಾದಂತೆ ಚಿತ್ರ ಲಿಪಿಯ ಮಕ್ಕಳ ಸಾಹಿತ್ಯವು, ನಂತರ ಚಿತ್ರ ಲಿಪಿಯ ವ್ಯವಸ್ಥಿತ ರೂಪವಾಗಿ ಲಿಖಿತ ಮಕ್ಕಳ ಸಾಹಿತ್ಯ ಜನ್ಮ ತಳೆಯಿತು.

ಪ್ರಪಂಚದ ಅತಿ ಪ್ರಾಚೀನ ಭಾಷೆಯಾದ ಸಂಸ್ಕೃತ ಒಳಗೊಂಡು ಇತರೆ ಯಾವುದೇ ಭಾಷೆಯ ಸಾಹಿತ್ಯವನ್ನು ಅವಲೋಕಿಸಿದರೂ, ಮಾನಸಿಕ ವಿಕಾಸ, ನೀತಿ ಬೋಧನೆ, ಹಾಗೂ ಮನರಂಜನೆಗೆ ಸಂಬಂಧಿಸಿದ ಶೈಕ್ಷಣಿಕ ಸಾಹಿತ್ಯವು ವಿಫುಲವಾಗಿ ಎಲ್ಲೆಡೆ ಕಂಡು ಬಂದಿತೆ ಹೊರತು ಮಕ್ಕಳಿಗಾಗಿಯೇ ರಚಿತವಾದ ಪ್ರತ್ಯೇಕ ಸಾಹಿತ್ಯದ ಪ್ರಕಾರ ಕಂಡು ಬರುವುದಿಲ್ಲ.

ಮಕ್ಕಳಿಗಾಗಿಯೇ ಎಂದು ಪ್ರತ್ಯೇಕವಾಗಿ ಸಾಹಿತ್ಯ ರಚಿಸುವ ಕಲ್ಪನೆ ಸಾಹಿತಿಗಳಿಗೆ ಬಂದದ್ದು, ೧೭ನೇ ಶತಮಾನದ ಅನಂತರ ವಸಾಹತುಶಾಹಿ ಸಂಪರ್ಕದಿಂದ. ಅಂದರೆ ಅದಕ್ಕೂ ಹಿಂದೆ ಮಕ್ಕಳಿಗಾಗಿ ರಚಿತ ಸಾಹಿತ್ಯವೆಂದರೆ ಒಗಟುಗಳು, ಶಿಶುಪ್ರಾಸಗಳು, ಜನಪದ ಕಥೆಗಳು, ಜೋಗುಳದ ಹಾಡುಗಳು ಮೊದಲಾದವು. ಬಹಳ ಹಿಂದಿನ ಕಾಲದಲ್ಲಿ ಊರಿಂದ ಊರಿಗೆ **'ಚಾರಣ'** ಎಂಬ ಕವಿಗಳು ಸಂಚರಿಸುತ್ತ ಮಕ್ಕಳಿಗಾಗಿ ಕಥನಕವನಗಳನ್ನು ಹಾಡುತ್ತ ಅವರನ್ನು ಸಂತೋಷ ಪಡಿಸುತ್ತಿದ್ದುದನ್ನು ಇತಿಹಾಸದಲ್ಲಿ ಗಮನಿಸಿದ್ದೇವೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯವೆಂಬ ಸ್ಪಷ್ಟರೂಪ ಬಂದದ್ದು, ಆಧುನಿಕ ಶಿಕ್ಷಣ ಹಾಗೂ ನವೋದಯ ಸಾಹಿತ್ಯದ ಸಂದರ್ಭದಿಂದ ಎನ್ನಬಹುದು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ೨೦ನೇ ಶತಮಾನ ಅತ್ಯಂತ ವಿಶಿಷ್ಟವಾದುದ್ದಾಗಿದ್ದು, ಈ ಸಂದರ್ಭದಲ್ಲಿ

ಸಣ್ಣಕತೆ, ಮಕ್ಕಳ ಸಾಹಿತ್ಯ, ಕಾದಂಬರಿ, ಮಹಾಕಾವ್ಯ, ಭಾವಗೀತೆ, ಪ್ರಬಂಧ, ನಾಟಕ, ವಿಚಾರ ಸಾಹಿತ್ಯ ಮೊದಲಾದವುಗಳನ್ನು ಒಳಗೊಂಡು ಕನ್ನಡ ಸಾಹಿತ್ಯವು ಸಮೃದ್ಧವಾಗಿ ಬೆಳೆದಿದೆ. ಇವುಗಳಲ್ಲಿ ಮಕ್ಕಳ ಸಾಹಿತ್ಯವು ಒಂದು ಗಮನಾರ್ಹ.

ಮಕ್ಕಳ ಸಾಹಿತ್ಯವೆಂದರೆ 'ಮಕ್ಕಳ ಮನಸ್ಸನ್ನು ಅರಳಿಸಿ, ಕುತೂಹಲವನ್ನು ಕೆರಳಿಸಿ, ಕಲ್ಪನೆಯನ್ನು ರೂಪಿಸಿ, ಭಾವನೆಗಳನ್ನು ಪ್ರಚೋದಿಸಿ, ಆನಂದದಲ್ಲಿ ಮೀಯಿಸಿ, ಅವರ ವ್ಯಕ್ತಿತ್ವವನ್ನು ರೂಪಿಸುವ ಸಾಹಿತ್ಯ'.

'ಯಾವ ಸಾಹಿತ್ಯ ಅಥವಾ ನುಡಿಕಟ್ಟನ್ನು ಮಕ್ಕಳು ಕೇಳಿ ಅಥವಾ ಓದಿ ಆನಂದದಿಂದ ಪರವಶರಾಗುವರೋ, ಪ್ರಚೋದಿತರಾಗುವರೋ, ಮಾನಸಿಕ ವಿಕಾಸಕ್ಕೆ ಒಳಗಾಗುವರೋ, ಕಲ್ಪನೆಯ ಕುದುರೆಯ ಬೆನ್ನೇರಿ ವಿಹರಿಸಬಯಸುವರೋ, ಭಾವೋದ್ರೇಕಗೊಂಡು ಬೆದರುವರೋ, ಬೆವರುವರೋ, ಕುಣಿಯುವರೋ ಇಂತ ಪ್ರಚೋದನೆ ನೀಡುವ ಜೀವಾಂಶವೇ ಮಕ್ಕಳ ಸಾಹಿತ್ಯ'.

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಬೇರನ್ನು ಜಾನಪದ ಪರಂಪರೆಯಲ್ಲಿ ಕಾಣಬಹುದು. ಅಜ್ಜಿ ಹೇಳುವ ಲಾಲಿಪದಗಳು, ಪ್ರಾಸಬದ್ಧವಾದ ಆಟದ ಪದಗಳು, ಒಗಟುಗಳು, ಕಥೆಗಳು, ಅದರಲ್ಲೂ ರಾಜಕುಮಾರಿಯರ ಕಥೆ, ಅದ್ಭುತರಮ್ಯ ಕಥೆ, ಕಾಗಕ್ಕ-ಗೂಬಕ್ಕ ಕಥೆ, ಪಂಚತಂತ್ರದ ಕಥೆ ಮೊದಲಾದವು ಮಕ್ಕಳ ಮನಸ್ಸನ್ನು ರಂಜಿಸಿವೆ. ಆಧುನಿಕ ಕಾಲದಲ್ಲಿ ಮುದ್ರಣ ಕಲೆ ಬಂದ ಮೇಲೆ ಮಕ್ಕಳ ಸಾಹಿತ್ಯ ವಿಫುಲವಾಗಿ ಬೆಳೆಯಿತು. ಕನ್ನಡದ ಪ್ರಸಿದ್ಧ ಸಾಹಿತಿಗಳನೇಕರು ಮಕ್ಕಳ ಮನಸ್ಸನ್ನು ಪ್ರವೇಶಿಸಿ, ಅವರಿಗೆ ಇಷ್ಟವಾಗುವ ಸಾಹಿತ್ಯ ರಚಿಸಿದರು. ಮಾಧ್ಯಮದವರಿಂದ ಇದಕ್ಕೆ ಉತ್ತಮವಾದ ಪ್ರಚಾರ ಸಿಕ್ಕಿತು.

ವಸಾಹತುಶಾಹಿಪ್ರಣೀತ ಶಿಕ್ಷಣ ಹಾಗೂ ಕಲಿಕಾ ಪ್ರಕ್ರಿಯೆಗಳು ಮಕ್ಕಳಿಗೆ ಉಪಯುಕ್ತವಾಗುವುದನ್ನು ಮಾತ್ರ ಕಲಿಸಬೇಕೆನ್ನುವ ನಿರ್ಧರಿತ ಸ್ವಭಾವದವು. ಇವು ಮಗುವನ್ನು ನಿರ್ಜೀವ ವಸ್ತುವನ್ನಾಗಿ ತನಗೆ ಬೇಕಾದಂತೆ ರೂಪಿಸಿಕೊಳ್ಳುವ ಮಾಧ್ಯಮವನ್ನಾಗಿ ವ್ಯವಹರಿಸಿದವು. ಕೊಟ್ಟಿದ್ದನ್ನು ವಿಧೇಯತೆಯಿಂದ ಉಪಯುಕ್ತವಾಗುವಂತೆ ಕಲಿಯುವ, ಶಿಕ್ಷಕ-ಪಾಲಕರ ಮುತುವರ್ಜಿಯಲ್ಲಿರುವವರು

ಮಕ್ಕಳನ್ನು ಒಂದು ಉಪಯುಕ್ತ ವಸ್ತುವನ್ನಾಗಿ ಪರಿಗಣಿಸಲಾಗುತ್ತಿದೆ. ಇಂಥ ವ್ಯವಸ್ಥೆಯಲ್ಲಿ ಇಂದಿನ ಮಕ್ಕಳ ಸಾಹಿತ್ಯ ಮೌಲ್ಯಗಳನ್ನು ಮಕ್ಕಳ ಮೇಲೆ ಹೇರುತ್ತ ಇಂದಿನ ಮಕ್ಕಳು ಶಾಲೆಯಿಂದ ಹೊರಬಂದ ಮೇಲೆ ತಮ್ಮ ಬದುಕನ್ನು ತಾವೇ ನಿಯಂತ್ರಿಸಿಕೊಳ್ಳಲು ಸಫಲರಾಗಿ ತಮ್ಮ ದುಡಿಮೆಯ ಮೇಲೆ ಬದುಕುವಂತಾಗುತ್ತಿದೆ. ಈ ನಿಟ್ಟಿನಲ್ಲಿ ಇತ್ತೀಚೆಗೆ ರಚಿತವಾದ ಮಕ್ಕಳ ಸಾಹಿತ್ಯ ಮಕ್ಕಳನ್ನು ದೇಶದ ಪ್ರಗತಿಗೆ ಪ್ರೇರಕವಾಗುವ ಉತ್ತಮೋತ್ತಮ ಗುಣಗಳನ್ನು ಬೆಳೆಸುವಲ್ಲಿ ಸಹಕಾರಿಯಾಗಿದೆ. ಅದರಲ್ಲಿಯೋ ಮಕ್ಕಳ ಸಾಹಿತ್ಯದಲ್ಲಿನ 'ಕಥಾ ಭಾಗದ' ಕಾರ್ಯವು ಬಹು ಮುಖ್ಯವಾದುದಾಗಿದ್ದು, ಈ ಕಥೆಯಲ್ಲಿನ ಸಾಮಾಜಿಕ ಮೌಲ್ಯಗಳಿಂದ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯ ಜೊತೆಗೆ ಉತ್ತಮ ಗುಣಗಳ ವೃದ್ಧಿಯು ಸಾಧ್ಯವಾಗಿರುವುದನ್ನು ಡಾ. ಸುಧಾ ಎನ್ ಮೂರ್ತಿ ರವರ 'ನನ್ನ ಮೆಚ್ಚಿನ ಮಕ್ಕಳ ಕಥೆಗಳು ಮತ್ತು ಸುಕೇಶಿನಿ ಮತ್ತು ಇತರ ಮಕ್ಕಳ ಕಥೆಗಳ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

**ಅಡಿ ಟಿಪ್ಪಣಿ :**

೧.ದಶಕದ ದಶಕದ ಮಕ್ಕಳ ಸಾಹಿತ್ಯ – ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಕೆ.ರವೀಂದ್ರನಾಥ, ಡಾ.ವೀರೇಶ ಬಡಿಗೇರ, ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೧-೨೦೦೦. ಅಧ್ಯಾಯ ೮ ಪು-೦೧

೨. ಶತಮಾನದ ಮಕ್ಕಳ ಸಾಹಿತ್ಯ-ಸಂ.ಎನ್.ಎಸ್.ರಘುನಾಥ್ ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೨೦೦೧

೩. ಕನ್ನಡ ವಿಶ್ವಕೋಶ ಸಿ.ಡಿ – ಮೈಸೂರು ವಿಶ್ವವಿದ್ಯಾಲಯ. ತಯಾರಕರು- ಕನ್ನಡ ಗಣಕ ಪರಿಷತ್ತು. ೨೦೦೬. ಪು-೦೧

೪. ಅದೇ – ಕನ್ನಡದಲ್ಲಿ ಮಕ್ಕಳ ಸಾಹಿತ್ಯ. ಪು-೦೧

೫. ಮಕ್ಕಳ ಸಾಹಿತ್ಯ ನೆಲೆ ಬೆಲೆ – ಎಸ್.ವಿ.ಶ್ರೀನಿವಾಸ ಪ್ರಕಾಶಕರು- ಕನ್ನಡ ಸಾಹಿತ್ಯ ಪರಿಷತ್ತು. ೨೦೦೬. ಪು-೧೩

೬. ವಿಕಿ ಪಿಡಿಯಾ. ಮಕ್ಕಳ ಸಾಹಿತ್ಯ- ಕಥನಾ ಬಾಗ. ೨೪.೧೦.೨೦೧೪

# ಅಧ್ಯಾಯ ೦೨

## ಮಕ್ಕಳ ಕಥಾ ಸಾಹಿತ್ಯದ ಬೆಳವಣಿಗೆಯ ಹಾದಿಗಳು.

ಮೊದಲಿಗೆ ಕಥೆ ಪದದ ಉತ್ಪತ್ತಿಯ ಬಗ್ಗೆ ಗಮನಿಸೋಣ. 'ಕಥೆ' ಎಂಬದು ಸಂಸ್ಕೃತದ 'ಕಥಾ' ಎಂಬ ಧಾತುವಿನಿಂದ ರೂಪುಗೊಂಡಿದೆ. 'ಕಥೆ' ಎಂದರೆ ನಡೆದ ಅಥವಾ ಕಲ್ಪಿತ ಸಂಗತಿಯನ್ನು ಹೇಳುವುದು ಹಾಗೂ ಕಥೆ ಹೇಳುವವ ಕಥಕ. ಇದು ಪದದ ಉತ್ಪತಿಯ ಅರ್ಥವಾದರೆ, ನಮ್ಮ ಮಹಾನ್ ಚಿಂತಕರ ಅಭಿಪ್ರಾಯದಂತೆ ಕಥನ ಸಾಹಿತ್ಯದ ಅರ್ಥ ಈ ಮುಂದಿನಂತಿದೆ.

ಇಂದಿನ 'ಮಕ್ಕಳು ನಾಳಿನ ಪೌರರು'. ಆದುದರಿಂದ "ಮಕ್ಕಳ ವಿಕಾಸ ಆರೋಗ್ಯಕರ ರೀತಿಯಲ್ಲಿ ಉಂಟಾಗಲು ಸಾಹಿತ್ಯ ಅತ್ಯುತ್ತಮ ಸಾಧನ" ಎನ್ನುವ ಡಾ.ರಾಧಾಕೃಷ್ಣನ್ ರವರ ಮಾತು ಅರ್ಥಪೂರ್ಣವಾಗಿದೆ.

"ಯಾವುದೇ ಆಧುನಿಕ ಸಾಹಿತ್ಯ ವೃಕ್ಷದಲ್ಲಿ ಸಚಿತ್ರ ಶಿಶು ಸಾಹಿತ್ಯ ಚಿಗುರು ಹೂ ಇದ್ದಂತೆ. ಅದಿಲ್ಲದೆ ವೃಕ್ಷ ಬರಡು". ಎಂದು ಜಿ.ಪಿ.ರಾಜರತ್ನಂ ಹೇಳಿರುವುದು ಮಕ್ಕಳ ಸಾಹಿತ್ಯದ ಮಹತ್ವವನ್ನು ತಿಳಿಸುತ್ತದೆ.

'ಮಕ್ಕಳ ಸಾಹಿತ್ಯ' ಸಾಹಿತ್ಯ ವೃಕ್ಷದ ತಾಯಿಬೇರು. ತಾಯಿ ಬೇರು ಆಳವಾಗಿ ಸದೃಢವಾಗಿ ನೆಲದಲ್ಲಿ ಬೇರೂರಿದಷ್ಟು ಸಂಪನ್ನವಾಗಿ, ಗಟ್ಟಿಯಾಗಿ ವೃಕ್ಷ ಮೇಲೆ ಬೆಳೆದು ಕಳಕಳಿಸತೊಡಗುತ್ತದೆ. ಸುಂದರ ಹೂಬಿಟ್ಟು ಜನರನ್ನು ರಂಜಿಸುವುದೇ ಅಲ್ಲದೆ ಸ್ವಾದಭರಿತ ಹಣ್ಣಿನಿಂದ ಜನಮನ ತಣಿಸುತ್ತದೆ ಎಂಬುದು ಮಕ್ಕಳ ಸಾಹಿತ್ಯದ ಮಹತ್ವದ ಒಳಹರಿವನ್ನು ಒತ್ತಿ ಹೇಳುತ್ತದೆ.

"ನಾನು ಚಿಕ್ಕಂದಿನಲ್ಲಿ ಬೆಳದಿಂಗಳಲ್ಲಿ ಕುಳಿತು ಹಿರಿಯರಿಂದ ಕೇಳಿದ ಕಥೆಗಳು, ಕೊಟ್ಟ ಸ್ಫೂರ್ತಿಯೇ ನಾನು ಸಾಹಿತ್ಯದಲ್ಲಿ ಗಳಿಸಿರುವ ಈ ಯಶಸ್ಸಿಗೆ ಕಾರಣ" ಎಂದು ಜ್ಞಾನಪೀಠ ಪ್ರಶಸ್ತಿ **ವಿಜೇತ ವಿಶ್ವನಾಥ ಸತ್ಯನಾರಾಯಣ** ಹೇಳುವುದು ಅಕ್ಷರಶಃ ಸತ್ಯವಾದುದಾಗಿದೆ.

ಮಕ್ಕಳಲ್ಲಿ ಬಾಲ್ಯದಿಂದಲೇ ಹೊಸತನ್ನು ಅರಿಯುವ, ಗ್ರಹಿಸುವ ಕುತೂಹಲ ನೈಜವಾಗಿಯೇ ಬೆಳೆದು ಬಂದಿರುವ ಪ್ರವೃತ್ತಿ. ಇದನ್ನು ತಣಿಸಲೆಂದೇ ಹಿರಿಯರು ಕಥೆ, ಕವನ, ಹಾಡು, ಗಾದೆ, ಗೀತೆ, ಲಾವಣಿ, ಒಗಟು, ನಾಟಕ, ನುಡಿಗಟ್ಟು ಮುಂತಾದ ಮಾಧ್ಯಮಗಳನ್ನು ಆರಿಸಿಕೊಂಡರು. ಎಲ್ಲ ಮಕ್ಕಳ ಮನಃಸ್ಥಿತಿ, ಬುದ್ದಿಶಕ್ತಿ, ಗ್ರಹಿಕೆ, ಆಸಕ್ತಿ ಒಂದೇ ಆಗಿರಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಮಕ್ಕಳಲ್ಲಿ ಕುತೂಹಲ ಕೆರಳಿಸಿ, ಆಸಕ್ತಿ

ಅರಳಿಸಿ, ಖುಷಿ ಕೊಡುವ ಸೂಕ್ತ ಮಾಧ್ಯಮವೊಂದನ್ನು ಹಿರಿಯರು ಆಯ್ದುಕೊಳ್ಳಬೇಕಾಯಿತು. ಮೂಲತಃ ಇವೆಲ್ಲವೂ ಮೌಖಿಕವಾಗಿಯೇ ನಡೆಯುತ್ತಿದ್ದವು. ಸಾಮಾನ್ಯವಾಗಿ ಮಕ್ಕಳಿಗೆ ತಾವು ದಿನನಿತ್ಯ ನೋಡುವ ವಸ್ತುಗಳಲ್ಲಿ ಆಸಕ್ತಿ ಅಷ್ಟಾಗಿ ಇರುವುದಿಲ್ಲ. ಬೃಹತ್ ವಸ್ತುಗಳು, ಅದ್ಭುತ ಸಾಹಸಗಳು, ಅಸಹಜ ಸನ್ನಿವೇಶ, ಅಸಮಾನ್ಯ ವಿಷಯಗಳು, ರೋಮಾಂಚಕಾರಿ ಘಟನೆ, ಚಮತ್ಕಾರ, ವಿಚಿತ್ರ ವೇಷಭೂಷಣ, ಹಾಸ್ಯ ಸನ್ನಿವೇಶ ಅವರಿಗೆ ಹೆಚ್ಚು ಸಂತೋಷವನ್ನು ಮನರಂಜನೆಯನ್ನು ಕೊಡುತ್ತವೆ. ಬಣ್ಣ ಬಣ್ಣದ ಅರಳಿದ ಹೂಗಳು, ಬೆಳದಿಂಗಳ ರಾತ್ರಿ ಥಳಥಳಿಸುವ ನಕ್ಷತ್ರ, ಚಂದಮಾಮ, ಪಶು–ಪಕ್ಷಿ, ಪ್ರಾಣಿ, ಗಿಡ–ಮರ, ಮಾತನಾಡತೊಡಗಿದರೆ, ಇವು ಅವರಿಗೆ ಆಪ್ಯಾಯಮಾನವಾಗಿ ತೋರುತ್ತವೆ. ಭೀಮ, ಕಂಸ, ಘಟೋತ್ಕಚ, ಹಿಡಿಂಬಿ, ಹರ್ಕ್ಯುಲಸ್ ಮುಂತಾದ ದೈತ್ಯ ಶಕ್ತಿಗಳನ್ನು ಅವರು ಮೆಚ್ಚುತ್ತಾರೆ. ಇಲಿ, ಇರುವೆ, ಹಲ್ಲಿ, ನೊಣ, ಜೇನು, ಅಳಿಲು ಮುಂತಾದವುಗಳು ಸಾಹಸಿಗಳಾದಾಗ ಮಕ್ಕಳ ಕಲ್ಪನೆಗೆ ರೆಕ್ಕೆ ಮೂಡಿ, ಅವರು ಆಕಾಶದಲ್ಲಿ ವಿಚ್ಛಂದವಾಗಿ ವಿಹರಿಸಲು ಆಶಿಸುತ್ತಾರೆ.

ಮಕ್ಕಳಿಗಾಗಿ ಹೇಳುವ ಕಥೆಗಳಲ್ಲಿ 'ಮೌಲ್ಯವನ್ನು' ನೇರವಾಗಿ ಹೇಳದೆ ಮನಸ್ಸಿಗೆ ನಾಟುವ ಘಟನೆಗಳ ಮೂಲಕ ನಿರೂಪಿಸಿದರೆ, ಮಕ್ಕಳ ಮನದಲ್ಲಿ ಶಾಶ್ವತವಾಗಿ ನೆಲೆಸಿಬಿಡುತ್ತದೆ. **ಸತ್ಯದ ಬಗ್ಗೆ ಹರಿಶ್ಚಂದ್ರನ ಕಥೆ; ಪಿತೃವಾಕ್ಯ ಪರಿಪಾಲನೆಗೆ ಶ್ರೀರಾಮನ ಕಥೆ; ಅಣ್ಣ ತಮ್ಮಂದಿರ ಜಗಳದಿಂದ ಕುಟುಂಬಗಳ ನಾಶ ಎಂಬುದಕ್ಕೆ ಮಹಾ ಭಾರತದ ಕಥೆ ಒಳ್ಳೆಯ ಉದಾಹರಣೆಗಳು**. ಮೌಲ್ಯ, ನೀತಿ ಬೋಧಕ ಪಂಚತಂತ್ರದ ಕಥೆಗಳು ಪ್ರಾಣಿ, ಪಕ್ಷಿಗಳ ಪಾತ್ರದಲ್ಲಿ ಬರುವುದರಿಂದ ಮಕ್ಕಳ ಮನದಲ್ಲಿ ಎಂದೂ ಹಸಿರಾಗುಳಿಯುತ್ತದೆ ಎಂಬುದಕ್ಕೆ ಈ ಕಥೆಗಳು ಪ್ರಪಂಚದಾದ್ಯಂತ ಜನಪ್ರಿಯವಾಗಿರುವುದು ನಿದರ್ಶನವಾಗಿವೆ.

**ಅಡಿ ಟಿಪ್ಪಣಿ :**

೧.ಸಂಕ್ಷಿಪ್ತ ಕನ್ನಡ ನಿಘಂಟು. ಪ್ರಕಟಣೆ ಕನ್ನಡ ಸಾಹಿತ್ಯ ಪರಿಷತ್ತು.೨೦೦೧.ಪು–೨೯೯ ಮತ್ತು ೨೨೦

೨. ಕನ್ನಡ ವಿಶ್ವಕೋಶ ಸಿ.ಡಿ – ಮೈಸೂರು ವಿಶ್ವವಿದ್ಯಾಲಯ. ತಯಾರಕರು– ಕನ್ನಡ ಗಣಕ ಪರಿಷತ್ತು. ೨೦೦೬. ಕಥಾ ಸಾಹಿತ್ಯ. ಪು–೦೧

೩.ಮಕ್ಕಳ ಸಾಹಿತ್ಯ ನೆಲೆ ಬೆಲೆ – ಎಸ್.ವಿ.ಶ್ರೀನಿವಾಸ ಪ್ರಕಾಶಕರು– ಕನ್ನಡ ಸಾಹಿತ್ಯ ಪರಿಷತ್ತು. ೨೦೦೬. ಪು–೧೩

೫. ಅದೇ ಪು– ೭೭

೬. ಅದೇ ಪು–೮೪

೭. ಅದೇ ಪು–೮೫

೮. ವಿಕಿ ಪಿಡಿಯಾ. ಮಕ್ಕಳ ಸಾಹಿತ್ಯ– ಕಥನಾ ಬಾಗ. ೨೪.೧೦.೨೦೧೪



## ಮೌಲ್ಯಗಳು – ಸಾಮಾಜಿಕ ಮೌಲ್ಯಗಳು

## ವ್ಯಾಖ್ಯೆ – ವ್ಯಾಖ್ಯಾನಗಳು

# ಅಧ್ಯಾಯ ೩

## ಮೌಲ್ಯಗಳು – ಸಾಮಾಜಿಕ ಮೌಲ್ಯಗಳು ವ್ಯಾಖ್ಯೆ – ವ್ಯಾಖ್ಯಾನಗಳು

ಮಾನವ ಸಮಾಜದಲ್ಲಿನ ಮೌಲ್ಯವ್ಯವಸ್ಥೆಗಳು ಮನುಷ್ಯನನ್ನು, ಪ್ರಾಣಿಗಳನ್ನು ಸ್ಪಷ್ಟವಾಗಿ ವ್ಯತ್ಯಾಸ ಮಾಡುವ ಒಂದು ಮುಖ್ಯ ಲಕ್ಷಣವಾಗಿದೆ. ಪ್ರತಿ ಮಾನವ ಸಮಾಜವು ತನ್ನದೇ ಆದ ಮೌಲ್ಯ ವ್ಯವಸ್ಥೆಯನ್ನು ಹೊಂದಿದ್ದು, ಪ್ರತಿ ಸಮಾಜವು ತನ್ನ ಸದಸ್ಯರು ಇಂತ ಮೌಲ್ಯಗಳನ್ನು ಅಂತರ್ಗತ ಮಾಡಿಕೊಳ್ಳುವುದೇ ಅಲ್ಲದೆ ಮೌಲ್ಯಗಳಿಗೆ ಅನುಗುಣವಾಗಿ ವರ್ತಿಸುವುದನ್ನು ನಿರೀಕ್ಷಿಸುತ್ತದೆ. ಹಾಗಾದರೆ ಮೌಲ್ಯವೆಂದರೆ ಏನು? ಎಂಬ ಪ್ರಶ್ನೆ ಸಹಜ.

ಯಾವುದೇ ಮೌಲ್ಯ ವ್ಯವಸ್ಥೆಯು ಕಾಲಾನುಕ್ರಮದಲ್ಲಿ ಕ್ರಮೇಣ ವಿಕಾಸ ಹೊಂದಿ, ಬದಲಾವಣೆಗೆ ಒಳಪಡುತ್ತದೆ. ಕೆಲವು ಇಚ್ಚಿಸಿ ಪಾಲಿಸಿದ ಮೌಲ್ಯಗಳಾದ ಸತ್ಯ, ಅಹಿಂಸೆ, ಧರ್ಮ, ದಯೆ ಮುಂತಾದವುಗಳು ಯಾವ ಮಹತ್ವ ಬದಲಾವಣೆಗಳು ಇಲ್ಲದೆ, ತಲತಲಾಂತರಗಳಿಂದಲೂ ಉಳಿದುಕೊಂಡೇ ಬಂದಿರಬಹುದು. ಸಾಮಾಜಿಕ ಮತ್ತು ಆದರ್ಶಗಳ ಬದಲಾವಣೆಯ ಫಲವಾಗಿ ಹೊಸ ಮೌಲ್ಯಗಳು ಉದಯಿಸಬಹುದು. ಇಂತ ಸನ್ನಿವೇಶಗಳಲ್ಲಿ ಹೊಸ ಮೌಲ್ಯಗಳು ಹಳೇ ಮೌಲ್ಯಗಳ ಸ್ಥಾನವನ್ನು ಆಕ್ರಮಿಸುತ್ತವೆ. ನಮ್ಮ ರಾಷ್ಟ್ರದ ಇತಿಹಾಸವನ್ನು ಅಧ್ಯಯನ ಮಾಡಿದಾಗ, ಅನೇಕ ಹೊಸ ಮೌಲ್ಯಗಳು ಕಾಲಾಂತರದಲ್ಲಿ ಉದಯಿಸಿರುವುದು ಕಾಣಿಸುತ್ತದೆ.

**'ವ್ಯಕ್ತಿ, ಕಾಲ, ಆಲೋಚನೆ, ದೃಷ್ಟಿ, ಸಂಗತಿ ಸಂಬಂಧ ಮೊದಲಾದ ಜಗತ್ತಿನ ಚರಾಚರ ವಿಷಯಗಳಿಗೆ ಕಟ್ಟುವ ಬೆಲೆಯೇ ಮೌಲ್ಯ'** ಎಂಬುದು ಹಿರಿಯರ ನುಡಿಗಳಿಂದ ತಿಳಿದುಬಂದಿದೆ. ಮೌಲ್ಯಗಳು ಇಡೀ ಜೀವನವನ್ನು ಹಾಸುಹೊಕ್ಕಿದೆ ಮತ್ತು ವೈಯಕ್ತಿಕ ಜೀವನದಿಂದ ಅವಿಭಾಜ್ಯ ಎಂಬುದು ನಮಗೆ ತಿಳಿದಿದೆ. 'ನಮ್ಮ ಚೈತನ್ಯಶೀಲ ಚಟುವಟಿಕೆಗಳು ಮತ್ತು ಪರಿಸರಗಳ ನಡುವಿನ ಸಂಬಂಧಗಳನ್ನು ತಿಳಿಯುವ ಆಸಕ್ತಿಯೇ ಮೌಲ್ಯಗಳು'. ಶಿಕ್ಷಣದ ಎಲ್ಲಾ ಹಂತಗಳಲ್ಲೂ ಮೌಲ್ಯಗಳ ವಿಕಾಸವನ್ನು ಬಹಳ ಗುರುತರವಾಗಿ ಪರಿಗಣಿಸಲಾಗಿದೆ. ಮೌಲ್ಯಗಳ ವಿಕಾಸವೇ ಶೈಕ್ಷಣಿಕ, ಮನೋವಿಜ್ಞಾನ ಮತ್ತು ತತ್ವಶಾಸ್ತ್ರಗಳ ಮುಖ್ಯ ಅಂಶ. ನಮ್ಮ ಜೀವನದಲ್ಲಿ ಮೌಲ್ಯಗಳು ಎಂತಹ ಪ್ರಮುಖ ಪಾತ್ರವನ್ನು ಪಡೆದಿವೆ ಎಂದರೆ ಮೌಲ್ಯಗಳನ್ನು ಹೊರತುಪಡಿಸಿ ಯಾವ ಶಿಕ್ಷಣತಜ್ಞನೂ ಶಿಕ್ಷಣವನ್ನು ಕುರಿತು ಚಿಂತಿಸಲಾರ.

ಭಾರತೀಯ ತತ್ವಶಾಸ್ತ್ರದ ಒಂದು ಪ್ರಮುಖ ಲಕ್ಷಣವೆಂದರೆ ಜೀವನದಲ್ಲಿ ಮೌಲ್ಯಗಳಿಗೆ ಆಧ್ಯತೆ ನೀಡಿರುವುದು.ಮನುಷ್ಯ ಮತ್ತು ಮೌಲ್ಯ ಒಂದೇ ನಾಣ್ಯದ ಎರಡು ಮುಖಗಳು. ಮನುಷ್ಯ ಎಂದ ಕೂಡಲೇ ಮೌಲ್ಯಗಳು ಆತನಲ್ಲಿ ಮೊದಲೇ ಉದ್ದೀಪನಗೊಂಡಿರುತ್ತದೆ. ಹಾಗಾದರೆ, ಮೌಲ್ಯ ಎಂದರೇನು? ಎಂದು ಮಾತನಾಡುವಾಗ ಹೆಚ್ಚೆಂದರೆ ನಾವು ತೊದಲಬಹುದು. ಸಾಂದರ್ಭಿಕವಾಗಿ ಮಾತ್ರ ಮೌಲ್ಯವನ್ನು ಅರ್ಥಮಾಡಿಕೊಳ್ಳಬಹುದು. 'ಸೂರ್ಯಾಸ್ತಮಾನವು ಕೆಂಪು ಅಥವ ಗುಲಾಬಿ ಹೂವು ಕೆಂಪು ಬಣ್ಣದಲ್ಲಿದೆ' ಎಂಬುದು ಕೇವಲ ತಥ್ಯವನ್ನು ಸೂಚಿಸುತ್ತದೆ. ಹೀಗಲ್ಲದೆ ಇದೇ ಹೇಳಿಕೆಯನ್ನು 'ಸೂರ್ಯಸ್ತಮಾನ ಸುಂದರವಾಗದೆ ಅಥವಾ ಹೂದಾನಿಯಲ್ಲಿರುವ ಗುಲಾಬಿಯು ಸುಂದರವಾಗಿದೆ' ಎಂದು ಹೇಳಿದರೆ ಹೇಳಿಕೆಗಳು ಮೌಲ್ಯದ ತೀರ್ಪನ್ನು ಕೊಡುತ್ತದೆ. ಈ ತೀರ್ಪುಗಳು ನಿಜವಾಗಿರಬಹುದು ಅಥವಾ ಸುಳ್ಳಾಗಿರಬಹುದು.

ವಸ್ತುಗಳ ಚಟುವಟಿಕೆಗಳು, ಘಟನೆಗಳ ಕುರಿತಂತೆ ಮೌಲ್ಯ ತೀರ್ಮಾನವನ್ನು ಮಾಡಿದಾಗ ಸಾಮಾನ್ಯವಾಗಿ ನಾವು ಬಳಸುವ ಪದಗಳೆಂದರೆ ಒಳ್ಳೆಯದು, ಕೆಟ್ಟದ್ದು, ಸರಿಯಾದುದು, ತಪ್ಪು, ಸುಂದರ, ಕುರೂಪ, ಸಹ್ಯ, ಅಸಹ್ಯ ಮುಂತಾದ ಮೌಲ್ಯಯುತ ಪದಗಳು. ಮೌಲ್ಯಗಳು ನಮ್ಮ ಜೀವನಕ್ಕೆ ಅರ್ಥವನ್ನು, ಒಂದು ದೃಷ್ಟಿಕೋನವನ್ನು ಕೊಡುತ್ತವೆ. ಮೌಲ್ಯಗಳು ಇಲ್ಲದಿದ್ದಲ್ಲಿ ನಮ್ಮ ಸಾಮಾಜಿಕ, ರಾಷ್ಟ್ರೀಯ ಬದುಕು ದುಃಸ್ತರವಾದುದೇ ಅಲ್ಲದೇ ಅಪಾಯದಲ್ಲಿರುತ್ತದೆ.

**ವ್ಯಾಖ್ಯೆಗಳು:**

೧. **ಜಿ.ಆರ್.ಲೆಸ್ಲಿ, ಆರ್.ಎಫ್.ಲಾರ್ಸನ್, ಹೆಚ್.ಎಲ್.ಗಾರ್ಮನ್** ರವರ ಪ್ರಕಾರ ಮೌಲ್ಯಗಳು "ವಿಷಯಗಳಿಗೆ ಸಂಬಂದಿತ ಅಭಿಲಾಷೆಗಳ ಗುಂಪು ಕಲ್ಪನೆ". (Values are group conceptions of the relative desirability of things)

೨. **ಹೆಚ್.ಎಮ್.ಜಾನ್ಸನ್** ರವರ ಪ್ರಕಾರ ಮೌಲ್ಯಗಳೆನ್ನುವುದು "ಸಾಮಾನ್ಯ ಮಾನಕಗಳು ಮತ್ತು ಉನ್ನತ ದರ್ಜೆಯ ರೂಢಿಗಳೆಂದು ಗುರ್ತಿಸಿಕೊಂಡಿದೆ".

(Values are generl standards and may be ragrded as higher order norms)

ಮೇಲಿನ ಎಲ್ಲಾ ಅಭಿಪ್ರಾಯಗಳನ್ನು ಕ್ರೋಢಿಕರಿಸಿ ಗ್ರಹಿಕೆಗೆ ಹತ್ತಿರವಾದಂತಹ ಒಂದು ವ್ಯಾಖ್ಯಾನವನ್ನು ಕೊಡಬಹುದು. "ಮೌಲ್ಯಗಳು ಉನ್ನತಮಟ್ಟದ ನಿರ್ಣಾಯಕಗಳು ಅಥವಾ ಆಂತರಿಕವಾಗಿ ಅನುಭವಿಸಲ್ಪಡುವ ನೈತಿಕ ಅಗತ್ಯತೆಗಳು ಅಥವಾ ಆದರ್ಶ ನೀತಿ ಸಂಹಿತೆಗಳು".

ವಿವಿಧ ರೀತಿಯ ಅನುಭವಗಳ ಫಲವಾಗಿ ಪ್ರತಿ ವ್ಯಕ್ತಿಯೂ ಕ್ರಮೇಣ ತನ್ನದೇ ಆದ ಮೌಲ್ಯಗಳನ್ನು, ಮೌಲ್ಯಗಳ ವ್ಯವಸ್ಥೆಯನ್ನು ಪಡಿದುಕೊಳ್ಳುತ್ತಾನೆ. ವಾಸ್ತವದಲ್ಲಿ ಮೌಲ್ಯಗಳು ನಮ್ಮ ವರ್ತನಾ ವಿನ್ಯಾಸಗಳ ಹಾಗೂ ಅನುಮಾನಿಸಲ್ಪಟ್ಟ ಪ್ರವೃತ್ತಿಗಳು. ಮಾನವನ ವ್ಯಕ್ತಿತ್ವ ಆಯಾಮಗಳಾದ ವೈಯಕ್ತಿಕ, ಸಾಮಾಜಿಕ, ನೈತಿಕ, ಮಾನವೀಯ, ಆಧ್ಯಾತ್ಮಿಕ ಮುಂತಾದವುಗಳಿಗೆ ಸಂಬಂಧಿಸಿರಬಹುದು. ಮೌಲ್ಯಗಳು ಮಾನವನ ಅಸ್ತಿತ್ವ ಮತ್ತು ಅನುಭವಗಳನ್ನು ಭೇದಿಸುತ್ತವೆ. ಮೌಲ್ಯಗಳು ಧರ್ಮ, ಶಿಕ್ಷಣ ಮತ್ತು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಆದ್ದರಿಂದ ಮಾನವನ ಅಗತ್ಯತೆಗಳನ್ನು ಪೂರೈಸುವ ಸಾಮರ್ಥ್ಯ ಪಡೆದಿರುವ ಯಾವುದೇ ಆಗಲಿ ಮೌಲ್ಯವೆನಿಸುಕೊಳ್ಳುತ್ತದೆ. ಇಂತಹ ಪೂರೈಕೆಗಳು ಭೌತಿಕ ಮನೋವೈಜ್ಞಾನಿಕ ಆಧ್ಯಾತ್ಮಿಕ ಮುಂತಾದವುಗಳಾಗಿರಬಹುದು. ಮೌಲ್ಯಗಳ ವಿಕಾಸವು ಮೂಲಭೂತವಾಗಿ ಆಸಕ್ತಿಗಳು ಬದಲಾದಂತೆ ಮೌಲ್ಯಗಳ ಅರ್ಥೈಸುವಿಕೆಯೂ ಬದಲಾಗುತ್ತದೆ ಅಥವಾ ಅರ್ಥೈಸುವಿಕೆ ಬದಲಾದಂತೆ ಮೌಲ್ಯಗಳು ಬದಲಾಗುತ್ತವೆ.

ಅರ್ಥಪೂರ್ಣ ಅನುಭವಗಳಿಗೆ ಮೌಲ್ಯಗಳು ಗುರುತರವಾದ ಆಧಾರ ಒದಗಿಸುತ್ತದೆ. ನಮ್ಮ ಬದುಕಿನ ಹಾಗೂ ಬದುಕಿನ ಚಟುವಟಿಕೆಗಳ ಅವಿಭಾಜ್ಯ ಅಂಗ ಮೌಲ್ಯಗಳು. ನಮ್ಮ ಬಯಕೆಗಳನ್ನೂ ಪರಾಮರ್ಶಿಸಿ, ಸಂಬೋಧಿಸುತ್ತವೆ. ಮೌಲ್ಯಗಳ ಅರ್ಥ, ನಿಹಿತಾರ್ಥಗಳಲ್ಲಿ ಸ್ವಲ್ಪಮಟ್ಟಿಗೆ ಐಕ್ಯತೆ ಸಮಾನತೆಗಳನ್ನು ಪಡೆದಿದ್ದರೂ ಸಹ ಮೌಲ್ಯಗಳಲ್ಲಿ ವೈವಿಧ್ಯತೆಗಳಿರುವುದರಿಂದಲೇ ವರ್ಗೀಕರಣಕ್ಕೂ ಒಳಪಡುತ್ತದೆ. ಬೇರೆ ಬೇರೆ ಆಧಾರಗಳನ್ನು ಅವಲಂಬಿಸಿ ಬೇರೆ ಬೇರೆ ವರ್ಗೀಕರಣಗಳು ರೂಪಿಸುತ್ತವೆ.

ಮೌಲ್ಯಗಳನ್ನು ಅನೇಕ ರೀತಿಯಲ್ಲಿ ವರ್ಗೀಕರಿಸಬಹುದೆಂಬುದು ಸ್ಪಷ್ಟ. ಆಂತರೀಕ ಮತ್ತು ಬಾಹ್ಯ ಎಂಬ ಸಾಧಕ ವರ್ಗೀಕರಣಗಳನ್ನೂ ಗುರ್ತಿಸಲಾಗಿದೆ. ಒಟ್ಟಾರೆಯಾಗಿ, ಮೌಲ್ಯಗಳನ್ನು ಈ ಕೆಳಗಿನ ನಿರ್ಣಾಯಕಗಳಿಂದ ವರ್ಗೀಕರಿಸಬಹುದು.

- ವಿಷಯ ನಿಷ್ಠ ಮತ್ತು ವಸ್ತು ನಿಷ್ಠ ಮಾದರಿ.
- ವ್ಯಕ್ತಿ ಸಂಬಂಧಿತ(ಖಾಸಗಿ) ಮತ್ತು ವ್ಯಕ್ತಿ ಸಂಬಂಧಿತವಲ್ಲದ ಮಾದರಿ.
- ಪುರಾತನ ಮತ್ತು ಆಧುನಿಕ.
- ವೈಜ್ಞಾನಿಕ ಮತ್ತು ಆಧ್ಯಾತ್ಮಿಕ.
- ಬದಲಾಗುವ ಮತ್ತು ಬದಲಾಗದ/ತಾತ್ಕಾಲಿಕ ಮತ್ತು ಶಾಶ್ವತ.
- ವೈಯಕ್ತಿಕ ಮತ್ತು ಸಾಮಾಜಿಕ.
- ಆದರ್ಶ ಮತ್ತು ಲೌಕಿಕ.
- ಅನಂತ ಮತ್ತು ಅಂತ್ಯ.

ಮೌಲ್ಯಗಳನ್ನು ನಮ್ಮ ಸರಿತಪ್ಪುಗಳ ಒಳಿತು, ಕೆಡುಕುಗಳ ಸೌಂದರ್ಯ ಕುರೂಪ ಮುಂತಾದ ಅನಿಸಿಕೆ ಅಭಿಪ್ರಾಯಗಳ ಮೇಲೂ ವರ್ಗೀಕರಿಸಬಹುದು. ಭಾರತೀಯ ತತ್ವಶಾಸ್ತ್ರ ಸಂಪ್ರದಾಯ ಅಥವಾ ಆಚಾರದಲ್ಲಿ ಮೌಲ್ಯಗಳನ್ನು ಪ್ರೇಯಸ್ ಮತ್ತು ಶ್ರೇಯಸ್ ಎಂಬ ಶೀರ್ಷಿಕೆಗಳಲ್ಲಿ ವರ್ಗೀಕರಿಸಲ್ಪಟ್ಟಿದೆ. ಪ್ರೇಯಸ್ ಎಂದರೆ 'ಭೌತಿಕ ಅಥವಾ ಪ್ರಾಪಂಚಿಕ ಸಾಧನೆ', ಶ್ರೇಯಸ್ ಎಂದರೆ 'ಆಧ್ಯಾತ್ಮಿಕ ಸಾಧನ' ಎಂದು ಗುರ್ತಿಸಲಾಗಿದೆ. ಅಲ್ಲದೆ ನೈತಿಕ ಮೌಲ್ಯಗಳು, ಧಾರ್ಮಿಕ ಮೌಲ್ಯಗಳು, ರಾಜಕೀಯ ಮೌಲ್ಯಗಳು, ಸಾಮಾಜಿಕ ಮೌಲ್ಯಗಳು ಮೊದಲಾದ ರೀತಿಯಲ್ಲೂ ಮೂಡಿಬಂದಿದೆ.

ಮೌಲ್ಯಗಳ ವಿಧಗಳಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ ಮೌಲ್ಯಗಳ ಭಿನ್ನವಾಗಿವೆ. ಜನರು ಅನುಸರಿಸುವ ಮತ್ತು ಹೇಳುವ ಮೌಲ್ಯಗಳ ಮಧ್ಯೆ ಬಹು ದೊಡ್ಡ ಅಂತರವಿದೆ. ಬಹಳಷ್ಟು ರಾಜಕೀಯ ನಾಯಕರು, ವರ್ತಕರು, ವ್ಯಾಪಾರಿಗಳು ಏನನ್ನು ಹೇಳುತ್ತಾರೋ ಅದೇ ಅವರ ಮೌಲ್ಯಗಳು ಅಗಿರುತ್ತವೆ. ಆದರೆ, ಸಾಮಾಜಿಕ, ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳು ಏನನ್ನು ಹೊಂದಿದೆಯೋ ಅದೇ ಮೌಲ್ಯಗಳನ್ನು ಸಮಾಜದಲ್ಲಿ ಕಾಣಬಹುದು.

ಸಮಾಜದಲ್ಲಿನ ಸಂಸ್ಕೃತಿಯ ಒಂದು ಪ್ರಮುಖವಾದ ಭಾಗವೇ ಸಾಮಾಜಿಕ ಮೌಲ್ಯವಾಗಿದೆ. ಸಾಮಾಜಿಕ ಮೌಲ್ಯದಲ್ಲಿನ ನೀತಿ ಮತ್ತು ನೀತಿ ತತ್ವಗಳು, ಸಮಾಜದಲ್ಲಿನ ಸಾಮಾಜಿಕ ಪ್ರಕ್ರಿಯೆಗಳನ್ನು ನಿಯಂತ್ರಿಸಿ ನಿರ್ದೇಶಿಸುತ್ತವೆ. ಸಾಮಾಜಿಕ ಮೌಲ್ಯಗಳು ಆದರ್ಶಗಳ ಸ್ಥಿರತೆಗೆ ಸಹಕಾರಿಯಾದುದಾಗಿದ್ದು, ಅದರ ಯಶಸ್ವಿ ನಿರ್ವಹಣೆಗೆ ಅಗತ್ಯವಾದ

ಮಾರ್ಗದರ್ಶನವನ್ನು ನೀಡುತ್ತದೆ. ಜನತೆಯು ತಮ್ಮ ದೈನಂದಿನ ಜೀವನವನ್ನು ನಿಭಾಯಿಸಲು, ಸುಖ–ದುಃಖಗಳನ್ನು ಅಳೆಯಲು, ಪರ್ಯಾಯ ಕಾರ್ಯಗಳ ಆಯ್ಕೆಗೆ, ಸಾಮಾಜಿಕ ಮೌಲ್ಯಗಳು ನಿರ್ಧಾರಕಗಳಾಗಿವೆ.

ನಮ್ಮ ಜೀವನದಲ್ಲಿ ನಂಬಿಕೆಗಳು ಮತ್ತು ಸಿದ್ಧಾಂತಗಳು ಮಹತ್ವವಾದ ಪಾತ್ರ ವಹಿಸುವಂತೆ ಸಾಮಾಜಿಕ ಮೌಲ್ಯಗಳು ನಮ್ಮ ವ್ಯಕ್ತಿತ್ವ ಹಾಗೂ ಸಾಮಾಜಿಕ ಧೋರಣೆಗಳನ್ನು ರೂಪಿಸುತ್ತವೆ. ಜೊತೆಗೆ ಸಮಾಜದ ಪ್ರತಿ ಇರುವ ನಮ್ಮ ದೃಷ್ಟಿಕೋನ, ವ್ಯವಹಾರ ಕೌಶಲ್ಯಗಳನ್ನು ಪ್ರಭಾವಿಸುತ್ತವೆ. ಸ್ನೇಹಿತರನ್ನೂ, ಸಹೋದ್ಯೋಗಿಗಳನ್ನೂ, ಮತ್ತಿತರರನ್ನು ಅಳೆಯುವುದು ಸಾಮಾಜಿಕ ಮೌಲ್ಯಗಳ ಆಧಾರದ ಮೇಲೆಯೇ. ಈ ಮೌಲ್ಯಗಳೇ ಜೀವನಕ್ಕೆ ಅರ್ಥವನ್ನು ಕೊಟ್ಟು ಅಗತ್ಯವಾದ ದಿಕ್ಕು ಮತ್ತು ಗುರಿಯನ್ನು ತೋರಿಸುತ್ತದೆ. ಮಾನವನ ನೆಲೆ ಹಾಗೂ ಒಲವುಗಳನ್ನು ಸಾರುವುದು ಈ ಮೌಲ್ಯಗಳೇ. ಒಟ್ಟಾರೆಯಾಗಿ ಸಾಮಾಜಿಕ ಮೌಲ್ಯಗಳು ಸಮಾಜದ ಪ್ರಗತಿಗೆ ಪೂರಕ ಹಾಗೂ ಪ್ರೇರಕವಾದ ನೀತಿಗಳಾಗಿವೆ.

ನಾವು ನಂಬಿದ ಮೌಲ್ಯಗಳನ್ನು ಅನುಭವವು ದೃಢಪಡಿಸುತ್ತಾ ಹೋಗುತ್ತದೆ. ಮೌಲ್ಯವನ್ನು ಅಂತರ್ಗತ ಮಾಡಿಕೊಂಡಾಗ ಅದು ಶಕ್ತಿಯುತವಾಗುತ್ತಾ ಹೋಗುತ್ತದೆ. ಉದಾಹರಣೆಗೆ, ಶಿಸ್ತನ್ನು ತೆಗೆದುಕೊಂಡರೆ, ಅಶಿಸ್ತಿನಿಂದಾಗುವ ತೊಂದರೆಗಳು ಶಿಸ್ತಿನಿಂದ ಹೇಗೆ ನಿವಾರಣೆಯಾಗುತ್ತದೆ ಎನ್ನುವುದು ಅರ್ಥವಾದಲ್ಲಿ ಪ್ರಜ್ಞಾ ಪೂರ್ವಕವಾಗಿ ಶಿಸ್ತನ್ನು ಅಳವಡಿಸಲು ಹಾಗೂ ಶಿಸ್ತಿನ ಪರಿಸರವನ್ನು ನಿರ್ಮಿಸಿಕೊಳ್ಳಲು ಎಲ್ಲಾ ಪ್ರಯತ್ನಗಳನ್ನು ಸಹಜವಾಗಿಯೇ ಮಾಡಲಾಗುತ್ತದೆ. ಈ ರೀತಿಯಾಗಿ ಸಾಮಾಜಿಕ ಮೌಲ್ಯಗಳು ಸ್ವತಃ ಬದಲಾವಣೆಗೆ ಒಳಪಡದೆ, ಸ್ಥಿತಿಯನ್ನು ಅಗತ್ಯಕ್ಕೆ ತಕ್ಕಂತೆ ಬದಲಾಯಿಸುತ್ತದೆ.

ಮೌಲ್ಯಗಳು ಸಂಸ್ಕಾರ ಜನ್ಯವಾದುದು. ಹಾಗೂ ದಿನೇ ದಿನೇ ಕಲಿಕೆಗೆ ಒಳಪಡುವಂತಹದ್ದಾಗಿದ್ದು, ಮೌಲ್ಯಗಳು ನಮ್ಮಲ್ಲಿ ನೆಲೆಯೂರಿದಾಗ ಆದರ್ಶಗಳಾಗಿ ಮಾರ್ಪಡುತ್ತದೆ. ಅಂತಹ ಆದರ್ಶಮಯತೆಗೆ ಸಾಮಾಜಿಕ ಮೌಲ್ಯಗಳ ಪಾತ್ರ ಹಿರಿದಾದುದಾಗಿದ್ದು, ಇದನ್ನು ರೂಪಿಸುವಲ್ಲಿ ಮಕ್ಕಳ ಕಥೆಗಳು ಪ್ರಭಾವಿ ಸಾಧನವಾಗಿದೆ. ಇದಕ್ಕೆ ಒಂದು ರೂಪ ಕೊಟ್ಟಿದ್ದು ಮಹಿಳಾ ಮಕ್ಕಳ ಕಥೆಗಾರರಾಗಿದ್ದು, ಅವರಲ್ಲಿ ಡಾ.ಸುಧಾ ಎನ್ ಮೂರ್ತಿ ರವರ ಕನ್ನಡ ಮಕ್ಕಳ ಕಥಾ ಸಂಕಲನಗಳಾದ ನನ್ನ ಮೆಚ್ಚಿನ ಮಕ್ಕಳ ಕಥೆಗಳು ಮತ್ತು ಸುಕೇಶಿನಿ ಮತ್ತು ಇತರ ಮಕ್ಕಳ ಕಥೆಗಳಲ್ಲಿ ಸಾಮಾಜಿಕ ಮೌಲ್ಯಗಳ ಛಾಪನ್ನು ಅಧ್ಯಯನಿಸಲಾಗಿದೆ.

**ಅಡಿ ಟಿಪ್ಪಣಿ:**

೧. Values and education in Independent India – G.N.Kaul. The associated publishers. 1993 ಪು–೩೩

೨. Human values in education – N.L.Gupta. published and printed by Ashok Kumr Mittal, concept publishing company, New Delhi. 2000. ಪು–೨೨, ೨೬, ೨೭

೩. ಸಂಕ್ಷಿಪ್ತ ಕನ್ನಡ ನಿಘಂಟು. ಪ್ರಕಾಶಕರು–ಕನ್ನಡ ಸಾಹಿತ್ಯ ಪರಿಷತ್ತು.೨೦೦೧. ಪು–೧೦೬೯

೪.ಅಭಿಜ್ಞ– ಪ್ರ.ಸಂ. ಡಾ.ಹೆಚ್.ಜೆ.ಲಕ್ಕಪ್ಪ ಗೌಡ, ಸಂ. ಆಯಾರಾಜಶೇಖರ. ಪ್ರಕಾಶಕರು: ಡಾ.ಸಾ.ಶಿ.ಮರುಳಯ್ಯ ಅಭಿನಂದನ ಸಮಿತಿ. ೨೦೦೧. ಪು–೯೧

೫. ಅದೇ ಪು–೯೨

೬. ಎಮ್.ಎಡ್ ಅಧ್ಯಯನ ಸಾಮಗ್ರಿ – ಮೈಸೂರು ವಿಶ್ವವಿದ್ಯಾಲಯ. ೨೦೧೩. ಶಿಕ್ಷಣ ತತ್ವಶಾಸ್ತ್ರ ಮತ್ತು ಸಮಾಜಶಾಸ್ತ್ರ ಮೌಲ್ಯ ಮೀಮಾಂಸೆ. ಪು–೦೧

೭.ಅದೇ ಪು–೩೩

೮.ಕಲಿಯಲು ಕಲಿಯುವುದು : ೪ ಮಾನವೀಯ ಮೌಲ್ಯಗಳು *kanaja.in › ಪುಸ್ತಕಗಳಿಂದ › ವಿಕಾಸ : ಜೀವನ–ಕೌಶಲ ಪಠ್ಯ ೨೪.೧೦.೨೦೧೪.*

೯. https://kn.wikipedia.org/wiki/ಸುಶೀಲತೆ. *೨೪.೧೦.೨೦೧೪.*

೧೦. ಅಂತರ್ ಜಾಲ ಮಾಹಿತಿ. www.defination and meanings of social values.wiki pedia.com / *www.business**dictionary**.com/**definit**.*03.01.2015

## ಅಧ್ಯಾಯ ೦೪
## ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥೆಗಳ
## ಹಿನ್ನೆಲೆಯಲ್ಲಿ ಸಾಮಾಜಿಕ ಮೌಲ್ಯಗಳ ಅಧ್ಯಯನ.

ಸಮಾಜದಲ್ಲಿನ ಸಾಂಸ್ಕೃತಿಕತೆ, ನೈತಿಕತೆಯ ಬೆಳವಣಿಗೆಗೆ ಸಾಮಾಜಿಕ ಮೌಲ್ಯದ ಪಾತ್ರವು ಹಿರಿದಾದುದಾಗಿದೆ. ಇಂತಹ ಸಾಮಾಜಿಕ ಮೌಲ್ಯಗಳು ಮಕ್ಕಳಲ್ಲಿ ಬೆಳೆಯಲು ಸಹಕಾರಿ ಸಾಧನ ಮಕ್ಕಳ ಕಥೆಯಾಗಿದೆ. ಆದರೆ ಕಥೆ, ಕಾವ್ಯ, ಪ್ರಬಂಧ, ಕಾದಂಬರಿ ರಚನೆಗಿಂತ ಬಹು ಕಷ್ಟಕರವಾದುದು ಮಕ್ಕಳ ಕಥಾ ರಚನೆ.

ಮೌಲ್ಯವು ಪ್ರಸಂಗ, ಸಂಗತಿ, ಅಂಶಗಳಿಗೆ ಸಾಪೇಕ್ಷವಾಗಿ ಹೊಂದುವಂತಿದ್ದು, ಮೌಲ್ಯದ ಏರಿಳಿತವು, ಇತರ ಪೂರಕ ಮೌಲ್ಯಗಳ ಏರಿಳಿತಕ್ಕೆ ಕಾರಣವಾಗುತ್ತದೆ. ಭೌತ ವಸ್ತು ಸಂಗತಿಗಳೊಡನೆ ಅನ್ವಯಿಸಿ ಹೊಂದಿರುವ ಒಳ್ಳೆಯ ಸಂಬಂಧವನ್ನು, ಸಾಮಾಜಿಕ ಮತ್ತು ಮಾನಸಿಕ ಸಂಗತಿಗಳ ಮೌಲ್ಯಗಳಲ್ಲಿ ಗಮನಿಸಬಹುದು. ಹೀಗಾಗಿ ಸಾಮಾಜಿಕ ಮೌಲ್ಯಗಳು **"ಭೌತ ಮತ್ತು ಮಾನಸಿಕ ಮೌಲ್ಯಗಳಿಂದ ಕೂಡಿದ್ದಾಗಿದ್ದು, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಮೌಲ್ಯಗಳೊಂದಿಗೆ ಪೂರಕವಾಗಿ ಸೇರಿದ್ದಾಗಿದೆ".** ಈ ಪೂರಕ ಮೌಲ್ಯಗಳನ್ನು ಬಿಟ್ಟು ಸಾಮಾಜಿಕ ಮೌಲ್ಯಗಳ ಏರಿಳಿತಗಳನ್ನು ಅಳೆಯುವುದಾಗಲೀ, ಅರ್ಥೈಸುವುದಾಗಲೀ ಸಾಧ್ಯವಿಲ್ಲ. ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಮೌಲ್ಯಗಳು ಸಾಮಾಜಿಕ ಮೌಲ್ಯಗಳೊಂದಿಗೆ ಕಾರ್ಯ, ಕಾರಣ, ಪರಿಣಾಮಗಳ ಕ್ರಿಯಾತ್ಮಕ ಪ್ರಕ್ರಿಯೆಗಳಿಗೆ ಒಳಪಟ್ಟಿದ್ದು, ಒಂದರೊಳಗೊಂದು ಸೇರಿರುತ್ತವೆ.

ಒಟ್ಟಾರೆಯಾಗಿ, ಸಾಮಾಜಿಕ ಮೌಲ್ಯಗಳು 'ಸಮಾಜ ಮತ್ತು ವ್ಯಕ್ತಿಯ ನಡುವಿನ ಕ್ರಿಯೆ, ಸಂಗತಿ, ಪ್ರಸಂಗಗಳಿಗೆ ಅನ್ವಯಿಸುವಂತಿದ್ದು, ಸಾಪೇಕ್ಷ ಸಂಬಂಧಗಳ ಒಳಹರಿವನ್ನು ಹೊಂದಿರುವುದಾಗಿದೆ'. ವ್ಯಕ್ತಿಯ ಕಲ್ಯಾಣದೊಂದಿಗೆ ಸಮಾಜದ ಕಲ್ಯಾಣವನ್ನು ಸಾಧಿಸುವದೇ ಅದರ ಮುಖ್ಯ ಆಶಯವಾಗಿರುವುದನ್ನು ತಿಳಿಯಬಹುದು. ಹಸಿಗೋಡೆಯಂತಿರುವ ಮಕ್ಕಳ ಮನಸ್ಸಿನ ಮೇಲೆ ಈ ಕಥೆಗಳು ಅಚ್ಚಳಿಯದಂತ ಪ್ರಭಾವ ಬೀರುತ್ತದೆ ಎಂದು 'ಡಾ.ಸುಧಾ ಎನ್ ಮೂರ್ತಿರವರು' ಅಭಿಪ್ರಾಯ ಪಟ್ಟಿದ್ದಾರೆ. ಅದುದರಿಂದಲೆ ಮಕ್ಕಳ ಕತೆಗಳ ರಚನೆಯಲ್ಲಿ ಸೃಜನಶೀಲತೆ ಹಾಗೂ ಕ್ರಿಯಾಶೀಲತೆಯ ಕಾರ್ಯವು ಮಹತ್ವದಾಗಿದೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಒಬ್ಬರಿಗೊಬ್ಬರು ಮೌಖಿಕವಾಗಿ ಬಾಯಿಯಿಂದ ಬಾಯಿಗೆ ಹೇಳಿಕೊಂಡು ಬಂದ ಸಾವಿರಾರು

ಕಥೆಗಳುಂಟು. ಅವು ಕೇವಲ ಕತೆಗಳಾಗಿರದೆ ಮೌಲ್ಯಧಾರಿತ ಕಥೆಗಳ ಗುಚ್ಚವನ್ನೇ ಹೊಂದಿರುವ ಕಥಾ ಸರಿತ್ ಸಾಗರವೇ ಇದೆ. ಅಂತಹ ಸಾವಿರಾರು ಕಥೆಗಳ ಸಾಗರವೇ ಇದೆ. ಈ ಕಥೆಗಳ ಸಾಗರಕ್ಕೆ ಹಲವಾರು ಮಹಾನ್ ಮಕ್ಕಳ ಸಾಹಿತಿಗಳು ತಮ್ಮದೇ ಆದ ಕೊಡುಗೆಯನ್ನು ನೀಡಿ ತಮ್ಮ ಛಾಪನ್ನು ಮೂಡಿಸಿದ್ದಾರೆ. ಅದರಲ್ಲೂ ಮಹಿಳಾ ಮಕ್ಕಳ ಕಥೆಗಾರ್ತಿಯರ ಪಾತ್ರ ಹಿರಿದಾದುದಾಗಿದೆ. ಇಂತಹ ಮಹಿಳಾ ಮಕ್ಕಳ ಕಥೆಗಾರ್ತಿಯರ ಸಾಲಿನಲ್ಲಿ ಪ್ರಖ್ಯಾತ ತಾಂತ್ರಿಕ ವಲಯಕ್ಕೆ ಮಾದರಿಯಾದ, ಪ್ರತಿಭೆ ಸೃಜನಶೀಲದ ಗಣಿಯಾದ **'ಡಾ.ಸುಧಾ ಎನ್. ಮೂರ್ತಿ'**ರವರೂ ಸಹ ಒಬ್ಬರು. ಇವರು ರಚಿಸಿದ ಕತೆಗಳು ಕೇವಲ ಕಥೆಗಳಾಗಿರದೆ, ಮಕ್ಕಳನ್ನು ತಿದ್ದಿ ತೀಡುವಂತಹ ಸಾಮಾಜಿಕ ಮೌಲ್ಯಗಳ ಛಾಪನ್ನೆ ಹೊಂದಿದ ಕಥೆಗಳಾಗಿವೆ. ಅಂತಹ ಸಾಮಾಜಿಕ ಮೌಲ್ಯಗಳನ್ನು ಈ ಕೆಳಗಿನ ನಕ್ಷೆಯಲ್ಲಿ ಚಿತ್ರಿಸಲಾಗಿದ್ದು, ಅದರ ಮೂಲಕವೇ **'ಡಾ.ಸುಧಾ ಎನ್. ಮೂರ್ತಿ' ಕನ್ನಡ ಮಕ್ಕಳ ಕಥೆಗಳ** ಅಧ್ಯಯನವನ್ನು ಮಾಡಲಾಗುವುದು.



ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮೌಲ್ಯಗಳು ಕಾಲ, ಪ್ರದೇಶ, ವಿಷಯಗಳಿಗನುಸಾರವಾಗಿ ಸ್ಥಿತ್ಯಂತರಗೊಳ್ಳುವ ಸಾಧ್ಯತೆಗಳಿವೆ. ಈ ಸಾಧ್ಯತೆಗಳು ಸಮಾಜದಲ್ಲಿನ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾದುದ್ದಾಗಿದ್ದು, ಮಕ್ಕಳಲ್ಲಿ ಚಿಕ್ಕಂದಿನಲ್ಲೇ ಮೌಲ್ಯಗಳ ಬೆಳವಣಿಗೆಯಾಗಲು ಕಥೆಗಳಿಂದ ಮಾತ್ರ ಸಾಧ್ಯ. ಮಕ್ಕಳ ಕತೆಗಳು ಮಕ್ಕಳಿಗೆ ಅನನ್ಯವಾದ, ಅಮೂಲ್ಯವಾದ ಅನುಭವವನ್ನು ನೀಡುವುದರ ಮೂಲಕ ಅವರಲ್ಲಿ ನೈತಿಕ ಮೌಲ್ಯದ ಬೆಳವಣಿಗೆಗೆ ಸಹಕಾರಿಯಾಗುವುದು. ಅಲ್ಲದೆ ಕತೆಗಳಿಂದ ಏಕಾಗ್ರಚಿತ್ತತೆಗೆ, ಊಹಿಸಿಕೊಳ್ಳುವ ಶಕ್ತಿ ಬೆಳವಣಿಗೆಗೆ ಹಾಗೂ ಕಲ್ಪನಾ ಸಾಮರ್ಥ್ಯ ವೃದ್ಧಿಗೆ ಸಹಕಾರಿ. ಈ ಹಿನ್ನೆಲೆಯಲ್ಲಿ ಮೇಲೆ ಚಿತ್ರಿಸಿರುವ ಡಾ.ಸುಧಾ ಎನ್ ಮೂರ್ತಿರವರ ಕನ್ನಡ ಕಥೆಗಳಲ್ಲಿನ ಸಾಮಾಜಿಕ ಮೌಲ್ಯಗಳು ತನ್ನ ಸ್ವರೂಪ, ಮಹತ್ವದಿಂದಾಗಿ ಸಾಮಾನ್ಯ ಮೌಲ್ಯಗಳು, ಪರಿವರ್ತಿತ ಮೌಲ್ಯಗಳು, ಉನ್ನತ ಮೌಲ್ಯಗಳು ಎಂದು ಮರು ವಿಂಗಡನೆಗೊಂಡಿದ್ದು ಅವು ಈ ಮುಂದಿನಂತಿವೆ.



ಸಾಮಾನ್ಯ ಮೌಲ್ಯಗಳು

- ಜಿಪುಣತೆ
- ಸೋಮಾರಿತನ
- ಮೂರ್ಖತೆ
- ಅತಿಯಾಸೆ
- ಕೈಕೆಲಸ
- ಮೈತ್ರಿ

ಪರಿವರ್ತಿತ ಮೌಲ್ಯಗಳು

- ನಂಬಿಕೆ
- ಕರುಣೆ
- ಪರೋಪಕಾರ
- ಚತುರತೆ
- ದಾನ
- ಚಿಂತನಶೀಲತೆ

ಉನ್ನತ ಮೌಲ್ಯಗಳು

- ತ್ಯಾಗ
- ಪ್ರೀತಿ
- ಸಹನೆ
- ಸತ್ಯ
- ದೇಶಭಕ್ತಿ

## ಸಾಮಾಜಿಕ ಮೌಲ್ಯಗಳಿಗೆ ಸಂಬಂಧಿಸಿದಂತೆ ಕಥೆಗಳ ವರ್ಗೀಕರಣ



## ಸಾಮಾನ್ಯ ಮೌಲ್ಯಗಳು

ಮನುಷ್ಯನ ದಿನನಿತ್ಯದ ಕಾರ್ಯವೈಖರಿಯಲ್ಲಿ ಆತನ ಅರಿವಿಗೆ ಬಾರದಂತೆ ಕೆಲವು ಮೌಲ್ಯಗಳು ಕಾರ್ಯಾಚರಣೆಗೊಳ್ಳುತ್ತವೆ. ಅವು ಸಾಮಾನ್ಯ ಅಂಶಗಳಂತಿದ್ದು, ನೀತಿಯುತವಾಗಿದ್ದು, ನಮ್ಮ ವ್ಯಕ್ತಿತ್ವವನ್ನು ರೂಪಿಸಿ ಮಾದರಿ ವ್ಯಕ್ತಿತ್ವವನ್ನು ಪಡೆಯುವಲ್ಲಿ ಸಹಕಾರಿಯಾಗಿರುವುದು. ಅಂತಹ ಸಾಮಾನ್ಯ ಅಂಶಗಳಂತಿರುವ ಮೌಲ್ಯಗಳನ್ನು ಮಕ್ಕಳ ಕಥೆಗಳಲ್ಲಿ ಕಾಣಲಾಗಿದ್ದು ಅವುಗಳು ಈ ಮುಂದಿನಂತಿವೆ.



# ಜಿಪುಣತೆ



'ಕೊಟ್ಟದ್ದು ಪರರಿಗೆ. ಬಚ್ಚಿಟ್ಟದ್ದು ತನಗೆ' ಎಂಬಂತೆ, ಜಿಪುಣತೆಯು ನೋಡಲು ಸುಂದರ. ಆದರೆ, ಅಂಟಿದರೆ ಬಿಡಲೊಲ್ಲದ್ದಾಗಿದ್ದು, ಇದರಿಂದ ತೊಂದರೆಗಳೇ ಹೆಚ್ಚು. ಜಿಪುಣರು ಅಗತ್ಯಕ್ಕಿಂತ ಹೆಚ್ಚು ಧನರಾಶಿಯನ್ನು ಸಂಗ್ರಹಿಸುವ ಗುಣದವರಾಗಿದ್ದದ್ದು, ಅಜ್ಜ-ಅಜ್ಜಿಯರ ಬಹಳಷ್ಟು ಕಥೆಗಳಿಂದ ತಿಳಿದುಬಂದಿದೆ. ಅಲ್ಲದೆ ಜಿಪುಣತೆಯ ಅಂತ್ಯ ಅಪಾರ ನಷ್ಟದಿಂದ ಕೂಡಿದ್ದು, ಕೊನೆಗೆ ವ್ಯಕ್ತಿಯ ಪ್ರಾಣವನ್ನೇ ತೆಗೆದುಕೊಳ್ಳುವ ಸ್ಥಿತಿಯನ್ನು ತಲುಪುತ್ತದೆ.

ಪ್ರಸ್ತುತ ಬಿ.ಆರ್ ಲಕ್ಷ್ಮಣರಾವ್ ರವರ ಭಾವಗೀತೆಯು ಇಂದಿನ ಜಿಪುಣತೆಗೆ ಅನ್ವಯಿಸುವಂತಿದೆ.

'ಜಿಪುಣ ಅಂದ್ರೆ ಜಿಪುಣ ಈ ಕಾಲ
ಏನೇ ಗಿರವೀ ಇಟ್ರೂ,
ಎಷ್ಟೇ ಬಡ್ಡಿ ಕೊಟ್ರು,
ಹುಟ್ಟೊದಿಲ್ಲ ಒಂದು ಗಳಿಗೆ ಸಾಲ.

ನಾಯಿ ಕಾಣಿಕೆ, ಜಿಪುಣ ಜೀವಣ್ಣ, ಜುಗ್ಗ ಜನ್ನು, ತೇಪೆ ತಾತ, ಒಂದು ಸೌಟು ತರಕಾರಿ ರಸ, ಜುಪುಣನ ಕಥೆ, ಗೆದ್ದವರು ಯಾರು?, ಮೊದಲಾದ ಕಥೆಗಳು ಜಿಪುಣತೆಯ ಬಗ್ಗೆ ಕಣ್ಣಿಗೆ ಕಟ್ಟುವಂತೆ ಮೂಡಿಬಂದಿದೆ. ಈ ಕಥೆಗಳಲ್ಲಿನ ಎರಡು ಕಥೆಗಳಾದ 'ಜುಪುಣ ಜೀವಣ್ಣ ಮತ್ತು ತೇಪೆ ತಾತನ' ಕಥೆಯಲ್ಲಿನ ಜಿಪುಣತೆಯ ಚಿತ್ರಣವನ್ನು ಈ ಮುಂದಿನಂತೆ ನೀಡಲಾಗಿದೆ.

೧.**ಜಿಪುಣ ಜೀವಣ್ಣ** : 'ಜೀವಣ್ಣ'ನೆಂಬುವನು ನಮ್ಮ ಕಥೆಯ ನಾಯಕನಾಗಿದ್ದು, ಈತನಂಥ ಜಿಪುಣರು ಅವನ ಪ್ರಾಂತ್ಯದಲ್ಲಿ ಕಣ್ಣಲ್ಲಿ ಎಣ್ಣೆ ಬಿಟ್ಟುಕೊಂಡ ಹುಡುಕಿದರೂ ಯಾರೂ ಸಿಗುವುದಿಲ್ಲ. **ಜುಪುಣತೆಗೆ** ಆತನು ಹೆಸರುವಾಸಿಯಾಗಿದ್ದ. ಅವನ ದೃಷ್ಟಿಯಲ್ಲಿ ಉಂಡರೆ, ಕುಡಿದರೆ ಅದು ವ್ಯರ್ಥವಾಗಿತ್ತು. ಆತನ ಜಿಪುಣತೆ ಯಾವ ಹಂತದಲ್ಲಿತ್ತೆಂದರೆ, ಆತನಿಗೆ ಯಾವುದರಲ್ಲೇ ಮನಸ್ಸಾದರೂ, ಖರ್ಚಾದೀತು ಎಂದು ಅದನ್ನು ತಡೆಯುತ್ತಿದ್ದ.

ಇಂತಹ ಸ್ವಭಾವದ ಜೀವಣ್ಣ ಒಂದು ದಿನ ತನ್ನ ಸ್ನೇಹಿತನ ಮನೆಗೆ ಹೋಗಿದ್ದಾಗ, ಅಲ್ಲಿ ಅವರು ಒಂದು ತುಂಡು ಕೊಬ್ಬರಿ ಮಿಠಾಯಿ ಕೊಟ್ಟರು. ಎಂದೂ ತಿಂದಿರದ ಕೊಬ್ಬರಿ ಮಿಠಾಯಿಯನ್ನು ಬಹಳ ರುಚಿಯಿಂದ ಚಪ್ಪರಿಸಿ ಚಪ್ಪರಿಸಿ ತಿಂದು, "ಅಯ್ಯೋ ಕೊಬ್ಬರಿ ಮಿಠಾಯಿ ಇಷ್ಟು ರುಚಿಯಾಗಿರುತ್ತದೆಯೇ" ಎಂದುಕೊಂಡು ತನ್ನ ಹೆಂಡತಿಗೆ ಮಾಡಲು ಹೇಳಿದನು. ಅಂದರೆ **ಆತನ ಜುಪುಣತನ ಎಷ್ಟಿತ್ತೆಂದರೆ ಇದು ವರೆಗೂ ಅವನು ಕೊಬ್ಬರಿ ಮಿಠಾಯಿಯನ್ನು ಕೊಂಡಾಗಲೀ, ಹೆಂಡತಿಗೆ ಹೇಳಿ ಮಾಡಿಸಾಗಲೀ ತಿಂದೇ ಇರಲಿಲ್ಲ**. ಹೀಗಾಗಿ ಹೆಂಡತಿಗೆ "ನೀನು ಸ್ವಲ್ಪೇ ಸ್ವಲ್ಪ ಕೊಬ್ಬರಿ ಮಿಠಾಯಿ ಮಾಡು' ಎಂದ. ಈತನ ಸ್ವಭಾವದಿಂದ ಬೇಸೆತ್ತ ಹೆಂಡತಿ ಮಿಠಾಯಿ ಮಾಡಲು ಬೇಕಾದ ಎಲ್ಲಾ ವಸ್ತುಗಳನ್ನು ತಂದು ಕೊಟ್ಟರೆ ಮಾಡಿ ಕೊಡುತ್ತೇನೆ ಎಂದು ಹೇಳುವಳು.

ಇಡೀ ರಾತ್ರಿ ಮಿಠಾಯಿಯ ನೆನಪಿನಿಂದಾಗಿ ನಿದ್ರೆ ಬರದೆ ಕೊನೆಗೆ ಜೀವಣ್ಣ ತಾನೊಂದು ತೆಂಗಿನಕಾಯಿ ತಂದುಕೊಡುವುದಾಗಿ, ಅದರಿಂದ ಮಿಠಾಯಿ ಮಾಡು ಎಂದು, ಆದರೆ ಯಾರಿಗೂ ಹೇಳಬಾರದೆಂದು ಹೇಳಿ ಪೇಟೆಗೆ ಹೋದನು. ಪೇಟೆಯಲ್ಲಿ ಅಂಗಡಿಯವನೊಂದಿಗೆ, ಉಗ್ರಾಣದವರೊಂದಿಗೆ, ತೋಟದವರೊಂದಿಗೆ, ೫ರೂಪಾಯಿಗೆ ೩ ರೂಪಾಯಿ, ೩ ರೂಪಾಯಿಗೆ ೧ ರೂಪಾಯಿಯೆಂದು **ಚೌಕಾಸಿ** ಮಾಡಿ, ಕೊನೆಗೆ ಯಾವುದೇ ದುಡ್ಡಿಲ್ಲದೆ ಕರಾವಳಿಯಿಂದ ತೆಂಗಿನಕಾಯನ್ನು ತರಲು ಹಂತ ಹಂತವಾಗಿ ೧೫ ಮೈಲಿ ದೂರ ನಡೆದು ಹೋಗುವನು. ಕರಾವಳಿಯಲ್ಲಿನ ಸಾಲು ಸಾಲಾಗಿ ಕಾಯಿಗಳಿಂದ ತುಂಬಿ ನಿಂತಿದ್ದ ಮರಗಳನ್ನು ನೋಡಿ, ಉಳಿತಾಯವಾಗುವುದೆಂದು ಸಂತೋಷಗೊಂಡು ಅಲ್ಲಿನ ಒಂದು ಮರವನ್ನು ಎಷ್ಟು ಬೇಕಾದರೂ ಕಾಯಿ ಕಿತ್ತುಕೊಳ್ಳೋಣ ಎಂದು ಸರ ಸರನೇ ಹತ್ತಿ, ಗೊನೆಗೆ ಕೈ ಹಾಕಿದ. ಅಷ್ಟರಲ್ಲಿ ಗಟ್ಟಿಯಾದ ತೆಂಗಿನ ಗೊನೆಯಿಂದ ಕಾಯನ್ನು ಕೀಳಲು ಹೋದ ಜೀವಣ್ಣ ತೆಂಕಣ ಗಾಳಿಗೆ ಗೊಂಚಲಿನೊಂದಿಗೆ ತೂಗಾಡತೊಡಗಿದ. ಕೈಕಾಲುಗಳು ನೋಯತೊಡಗಿ, ಅಳುಬಂದಂತಾಗಿ, ಜೀವಣ್ಣ ಕೆಳಗೆ ನೋಡಲಾಗಿ ಆಪತ್ಬಾಂಧವರಂತೆ ಮಾವುತ ಆನೆಯೊಂದಿಗೆ, ಕುದುರೆಸವಾರ ಕುದುರೆಯೊಂದಿಗೆ ಬಂದರು.

ಜೀವಣ್ಣ ಅವಸ್ಥೆಯನ್ನು ನೋಡಿದ ಆನೆಯವನು, ಆತನ ಜಿಪುಣತನದ ಅರಿವಿನಿಂದ ೧೦೦ ರೂಪಾಯಿಗೆ ಸಹಾಯ ಮಾಡಲು ಒಪ್ಪಿ, ಅವನನ್ನು ಮರದಿಂದ ಇಳಿಸುವಾಗ, ಭಾರಕ್ಕೆ ಆನೆಯು ಮುಂದೆ ಹೋಯಿತು. ಇದರಿಂದ ಮಾವುತ, ಜೀವಣ್ಣನೊಂದಿಗೆ ತೆಂಗಿನ ಗೊನೆಯನ್ನು ಹಿಡಿದುಕೊಂಡು ನೇತಾಡುವ ಸ್ಥಿತಿ ಬಂದಿತು. ಅಷ್ಟರಲ್ಲಿ ಕುದುರೆ ಸವಾರನು ಬಂದು, ಆತನಿಗೆ ಸಹಕರಿಸಲು ೧೦೦೦ ರೂಪಾಯಿಯ ಕರಾರಿನೊಂದಿಗೆ ಒಪ್ಪಿಕೊಂಡನು. ಈಗ ಆದ ಸ್ಥಿತಿಯು ಇನ್ನೂ ಹಾಸ್ಯಾಸ್ಪದವಾದುದು. ಜೀವಣ್ಣ, ಮಾವುತನನ್ನು ಇಳಿಸಲು ಹೋದ ಕುದುರೆ ಸವಾರ ಒಬ್ಬನ ಭಾರದ ಜೊತೆಗೆ ಮತ್ತಿಬ್ಬರ ಭಾರವು ಸೇರಿ ಭಾರ ತಡೆಯಲಾಗದೆ ಕುದುರೆಯು ಕೆನೆದಾಗ ಮೂವರೂ ನೆಲ ಕಚ್ಚಿದರು.

ಈ ಜಗ್ಗಾಟದಲ್ಲಿ ಮೇಲಿಂದ ತೆಂಗಿನಕಾಯಿಗಳು ದಬದಬನೆ ಇವರ ಮೇಲೆ ಬಿದ್ದು, ರಾಶಿಯಾಗಿ ಅವುಗಳ ಹೊಡೆತಕ್ಕೆ ಮೂಳೆಗಳು ಪುಡಿಪುಡಿಯಾದವು. ಕೊನೆಗೆ ಜೀವಣ್ಣನಿಗೆ ವೈದ್ಯಕೀಯ ಉಪಚಾರ ಎಲ್ಲಾ ಸೇರಿ ೧೦,೦೦೦ ರೂಪಾಯಿ ಹೆಚ್ಚು ಖರ್ಚಾಯಿತು. ಅಂದರೆ ೫ ರೂಪಾಯಿಯಿಂದ ತೆಂಗಿನ ಕಾಯನ್ನು ೧೦,೦೦೦ ರೂಪಾಯಿಗೆ ಕೊಂಡಂತಾಯಿತು. ಈ ರೀತಿ ತನ್ನ ಜಿಪುಣತನದಿಂದ ಜೀವಣ್ಣ ಅಪಾರ ನಷ್ಟವನ್ನು ಅನುಭವಿಸಿದನು.

**೨. <u>ತೇಪೆತಾತ:</u>** ಬಹಳ ದಿನಗಳ ಹಿಂದೆ ವೇಲಾಪುರದಲ್ಲಿ ಸೋಮಣ್ಣನೆಂಬ ಸಿರಿವಂತನಿದ್ದನು. ಅವನಿಗೆ ಬೇಕಾದಷ್ಟು ಜಮೀನು, ಹಣ, ಚಿನ್ನ ಎಲ್ಲವೂ ಇದ್ದಿತು. ಅವನ ಮಕ್ಕಳು ಬೇರೆ ಊರಿನಲ್ಲಿ ಒಳ್ಳೆಯ ಕೆಲಸದಲ್ಲಿದ್ದರು. ಸೋಮಣ್ಣ ಜಿಪುಣ. ಉಂಡರೆ ಹಣ ಖರ್ಚಾದೀತು, ಉಟ್ಟರೆ ಹೊನ್ನು ಕಡಿಮೆಯಾದೀತು ಎಂದು ಸದಾ ಕಾಲ ಅರೆ ಹೊಟ್ಟೆಯಲ್ಲಿ, ಹರುಕು ಬಟ್ಟೆಯಲ್ಲಿ ಜೀವನ ಸಾಗಿಸುತ್ತಿದ್ದ. ಈತನು 'ಜಿಪುಣ ಜೀವಣ್ಣನಿಗಿಂತ ಒಂದು ಕೈ ಮೇಲೆ'. ಸೋಮಣ್ಣನ ಹೆಂಡತಿ ಇವನ ಜಿಪುಣತನದಿಂದ ಸಾಕಾಗಿ ರೋಸಿ ಹೋಗಿದ್ದಳು. ಅವನು ಚಪ್ಪಲಿಕೊಂಡು ಎಷ್ಟು ವರ್ಷಗಳಾಗಿತ್ತೋ. ಅದಕ್ಕೆ ತೇಪೆ ಹಾಕಿ ಹಾಕಿ ಅದನ್ನೇ ಉಪಯೋಗಿಸುತ್ತಿದ್ದ.

ಒಮ್ಮೆ ಚರಂಡಿಯಲ್ಲಿ ಬಿದ್ದ ತನ್ನ ಚಪ್ಪಲಿಯನ್ನು ಮಕ್ಕಳ ಸಹಾಯದಿಂದ ತೆಗೆಸಿ, ಚಮ್ಮಾರನಿಗೆ ಹೊಲಿಯಲು ನೀಡಿದಾಗ, ಆತ ಮೊದಲೇ ಬಹಳಷ್ಟು ತೇಪೆಗಳಿರುವ ಚಪ್ಪಲಿಯನ್ನು ಹೊಲಿಸುವುದಕ್ಕಿಂತ ಹೊಸ ಚಪ್ಪಲಿಕೊಳ್ಳಬಾರದೆಂದು ಉಚಿತ ಸಲಹೆ ನೀಡಿ, ಆತ ಒಪ್ಪದಿದ್ದಾಗ "ಈ ತೇಪೆ ತಾತ" ಎಂದೂ ಹೊಸ ಚಪ್ಪಲಿ ಕೊಳ್ಳುವುದಿಲ್ಲ"

ಎಂದು ಗೊಣಗುತ್ತಾ ಚಪ್ಪಲಿ ಹೊಲಿದ. ಅಂದಿನಿಂದ ಸೋಮಣ್ಣನ ಹೆಸರು ಮಾಯವಾಗಿ 'ತೇಪೆತಾತ' ಎಂದು ಅನ್ವರ್ಥ ನಾಮ ಉಳಿಯಿತು. ಈ ಹೆಸರು ಯಾವ ಹಂತದವರೆಗೆ ಉಳಿಯಿತೆಂದರೆ, ಕೊನೆಗೆ ಸೋಮಣ್ಣ ತನ್ನ ಚಪ್ಪಲಿಯನ್ನು ತೆಜಿಸಲು ಒಪ್ಪಿದರೂ, ಹೆಸರು ಮಾತ್ರ ಹೋಗಲೇ ಇಲ್ಲ. ಲೋಕದ ನೀತಿಯಂತೆ ಒಮ್ಮೆ ಬಂದ ಹೆಸರು ಅಷ್ಟು ಸುಲಭವಾಗಿ ಹೋಗುವುದಿಲ್ಲ. ಹಾಗೆಯೇ ಚಪ್ಪಲಿಯನ್ನು ಕಾವೇರಿ ನದಿಗೆ ಹಾಗಿದಾಗ, ಬೆಸ್ತನು ಅದನ್ನು ಗುರುತಿಸಿ ತಂದು ಕೊಟ್ಟ, ದೂರದೂರಿನ ತಿಪ್ಪೆಗೆ ಹಾಕಲು ಚೀಲದಲ್ಲಿ ಹಾಕಿ ಕೊಟ್ಟಾಗ, ಅದನ್ನು ಹೊತ್ತೊಯ್ಯುತಿದ್ದವನಿಂದ, ಮತ್ತೊಬ್ಬ ತಂದು ನೀಡಿದ. ಕೊನೆಗೆ ಹೆಂಡತಿ, ಮಕ್ಕಳ ಅನುಮೋದನೆಯಂತೆ ವಸ್ತುಸಂಗ್ರಹಾಲಯಕ್ಕೆ ನೀಡಲಾಯಿತು. ದಾರಿಹೋಕರು ಸಂಗ್ರಹಾಲಯದ ವಿಳಾಸವನ್ನು ಕೇಳಲು 'ತೇಪೆತಾತ'ನ ಚಪ್ಪಲಿ ಇರುವ ಸಂಗ್ರಹಾಲಯ ಯಾವುದು? ಎಂದು ಕೇಳುವ ಹಂತಕ್ಕೆ ಅವನ ಜಿಪುಣತನ ಕಾರಣವಾಯಿತು.

ಈ ರೀತಿ ಮೇಲಿನ ಎರಡು ಕಥೆಯಿಂದ ತಿಳಿದು ಬರುವುದೇನೆಂದರೆ, ಜಿಪುಣತೆಯಿಂದ ಮನೆಮಂದಿಯವರೆಲ್ಲಾ ತೊಂದರೆ ಅನುಭವಿಸುವುದಲ್ಲದೆ, ಸಮಾಜದವರೂ ಅದರಿಂದ ಬೇಸತ್ತು ಹೋಗುವರು. ಸಮಾಜದವರು ಅದನ್ನು ಗುರುತಿಸಿ ಕೊನೆಯವರೆಗು ಬೆನ್ನು ಬಿಡುವುದಿಲ್ಲ. ಜಿಪುಣರು ತಮ್ಮ ಜಿಪುಣತೆಯನ್ನು ಬಿಟ್ಟರೂ, ಅದರ ಪ್ರಭಾವದಿಂದಾಗಿ ಪ್ರತಿಯೊಂದು ಕಾರ್ಯವು ಸುಸೂತ್ರವಾಗಿ ನಡೆಯುವಲ್ಲಿ ತೊಂದರೆಯನ್ನುಂಟು ಮಾಡುತ್ತದೆ. ಜಿಪುಣತೆಯು ನಕಾರತ್ಮಕ ಮೌಲ್ಯವಾಗಿದ್ದು, ವೈಯಕ್ತಿಕ ಹಾಗೂ ದೇಶದ ಪ್ರಗತಿಯ ಪಥದಲ್ಲಿ ದೊಡ್ಡ ಸಮಸ್ಯೆಯನ್ನು ಉಂಟು ಮಾಡಬಹುದೆಂಬುದನ್ನು ಸಂಶೋಧನೆಯಲ್ಲಿ ಅಂದಾಜಿಸಲಾಗಿದೆ. ಅಂದರೆ ಜಿಪುಣರು ತಮ್ಮ ಧನ ತಮ್ಮಲ್ಲೇ ಇರಬೇಕೆಂದು ಕೂಡಿಡುತ್ತಾ, ಸರ್ಕಾರಕ್ಕೆ ಅದರ ಲೆಕ್ಕ ನೀಡದೆ ಕಪ್ಪು ಹಣ ಸಂಗ್ರಹಕ್ಕೆ ಕಾರಣರಾಗುವ ಸನ್ನಿವೇಶಕ್ಕೆ ತುತ್ತಾಗಬಹುದು.

ಹೀಗಾಗಿ ಚಿಕ್ಕಂದಿನಿಂದಲೇ ಮಕ್ಕಳಲ್ಲಿ ಜಿಪುಣತನ ಎಂಬ ನಕಾರತ್ಮಕ ಮೌಲ್ಯವು ಬೆಳೆಯದಂತೆ ಮಾಡುವುದು ತಮ್ಮ ಕರ್ತವ್ಯವೆಂಬಂತೆ ಪೋಷಕರು ಹಾಗೂ ಶಿಕ್ಷಕರು ಕಾರ್ಯಪ್ರವೃತ್ತರಾಗಬೇಕೆಂಬ ಸಂದೇಶವನ್ನು ನೀಡುವಲ್ಲಿ ಕಥೆಯು ಯಶಸ್ವಿ ಮಾಧ್ಯಮವಾಗಿರುವುದನ್ನು ಈಗಾಗಲೇ ಕಾಣಲಾಗಿದೆ. ಪ್ರಸ್ತುತ ಪಡಿಸಿದ ಕಥೆಯಲ್ಲಿನ ಜೀವಣ್ಣ ಮತ್ತು ತೇಪೆತಾತ ಇಬ್ಬರು ಜಿಪುಣತನಕ್ಕೆ ಒಳಗಾಗಿ ಅದರ ಅನಾಹುತವನ್ನು ಮನಗಂಡು, ಸುಧಾರಿಸಿಕೊಂಡು, ಸಮಾಜದ ಒಳಿತಿನಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಜಿಪುಣತೆಯ ಅನಾಹುತದ ಬಗ್ಗೆ ನೀತಿಯನ್ನು ಹೇಳಲಾಗಿದೆ. ಕಥೆಯಲ್ಲಿ

ಜಿಪುಣತೆಯ ಬಗ್ಗೆ ಪರಿಣಾಮವನ್ನು ಮಾತ್ರ ಹೇಳದೆ, ಅದರ ನಿವಾರಣೆಯ ಮಾರ್ಗವನ್ನು ಸೂಚಿಸುವ ಮೂಲಕ ಮಕ್ಕಳು ಜಿಪುಣತೆಯನ್ನು ತಮ್ಮಲ್ಲಿ ಬೆಳೆಯಲು ಬಿಡದಂತೆ ಮಾಡುವಲ್ಲಿ ಉತ್ತಮವಾದ ನೀತಿ ಸಂದೇಶ ನೀಡಿರುವುದನ್ನು ಕಾಣಬಹುದು.

****

## ಸೋಮಾರಿತನ



ಸೃಷ್ಟಿಕರ್ತನ ಕುಲುಮೆ ಮನೆ ಈ ಸೃಷ್ಟಿ. ಇದರಲ್ಲಿನ ಚರಾಚರ ಜೀವಿಗಳು. ಬೆಟ್ಟ-ಗುಡ್ಡ, ಕಲ್ಲು-ಮಣ್ಣು, ನದಿ, ಕಾಲುವೆ, ಸೂರ್ಯ-ಚಂದ್ರ, ನಕ್ಷತ್ರ ಸರ್ವವೂ ಸೃಷ್ಟಿಕರ್ತನ ಕೊಡುಗೆಯಾಗಿದೆ. ಇಂತಹ ಕೊಡುಗೆಯಲ್ಲಿ ಮನುಷ್ಯನ ಶರೀರವೂ ಒಂದಾಗಿದೆ. ಮನುಷ್ಯನ ಶರೀರವೂ ಒಂದು ಉಪಕರಣವಿದ್ದ ಹಾಗೆ. ಉಪಕರಣವನ್ನು ಅಗತ್ಯಕ್ಕೆ ತಕ್ಕಂತೆ ತಮ್ಮ ಕೆಲಸವನ್ನು ಪೂರೈಸಿಕೊಳ್ಳಲು ಹೇಗೆ ಉಪಯೋಗಿಸಿ ಕೊಳ್ಳುತ್ತೇವೆಯೋ ಹಾಗೆಯೇ ನಮ್ಮ ಶರೀರವನ್ನು ಉಪಯೋಗಿಸಬೇಕು. ಅದು ನಮ್ಮ ದೈನಂದಿನ ದೈಹಿಕ ಕಾರ್ಯವಾಗಬಹುದು. ಇಲ್ಲವೇ ಮಾನಸಿಕ ಕಾರ್ಯಕ್ಕಾಗಿರಬಹುದು. ಇಲ್ಲವಾದರೆ ಹೇಗೆ ಉಪಕರಣವನ್ನು ಉಪಯೋಗಿಸದಿದ್ದಾಗ ಅದರಲ್ಲಿ ತೊಂದರೆ ತುಕ್ಕು ಹಿಡಿಯುತ್ತದೋ, ಹಾಗೆಯೇ ಶರೀರಕ್ಕೆ 'ಸೋಮಾರಿತನ' ಎಂಬ ಪೆಡಂಭೂತ ಬಂದು ವಕ್ಕರಿಸುತ್ತದೆ. ಇದು ಒಮ್ಮೆ ತನ್ನ ಹಾವಳಿಯನ್ನು ಶರೀರದ ಮೇಲೆ ಮಾಡಿದರೆ ಬಿಟ್ಟು ಹೋಗುವುದು ಬಲು ಕಷ್ಟ.

ನಮ್ಮ ಶರೀರವೆಂಬ ಉಪಕರಣವನ್ನು 'ಸೋಮಾರಿತನವು' ಆವರಿಸಿಕೊಳ್ಳದಂತೆ ನೋಡಿಕೊಂಡು, ಬಹಳಷ್ಟು ಸಾಧಿಸಲು ಇರುವುದನ್ನು ಕಾರ್ಯಗತಗೊಳಿಸಬೇಕು. ಶರೀರ ಬಲದಿಂದ ತಮ್ಮ ಕುಟುಂಬಕ್ಕಾಗಿ, ಸಮಾಜಕ್ಕಾಗಿ, ದೇಶಕ್ಕಾಗಿ ಮಾಡುವುದು ಬಹಳಷ್ಟಿದೆ. ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವ ನಮ್ಮ ದೇಶಕ್ಕೆ ಚುರುಕುತನದಿಂದ ತಮ್ಮನ್ನು ತೊಡಗಿಸಿ

ಕೊಳ್ಳಬೇಕು. ಆದರೆ ನಮ್ಮ ದೇಹ ಮನಸ್ಸು ಒಂದು ಸಮರ್ಥಭಾವ, ಆರೋಗ್ಯಕರ ಸ್ಥಿತಿಯಲ್ಲಿಲ್ಲದಿದ್ದರೆ, ಕುಟುಂಬಕ್ಕೆ, ಸಮಾಜಕ್ಕೆ, ದೇಶಕ್ಕೆ ನಾವು ಎಂತಹ ಕೊಡುಗೆಯನ್ನು ಕೊಡಲು ಸಾಧ್ಯವಾಗುವುದು?. ಮನುಷ್ಯ 'ಸೋಮಾರಿಯಾದರೆ' ಭಗವಂತನ ಕೊಡುಗೆಯಾದ ಶರೀರವೆಂಬ ಉಪಕರಣ ತುಕ್ಕು ಹಿಡಿಯುತ್ತದೆ. ಅನಗತ್ಯ ವಸ್ತುವಾಗಿ ಮೂಲೆ ಸೇರುತ್ತದೆ. ಅದುದರಿಂದ ಇಂದಿನ ಮಕ್ಕಳು, ವಿದ್ಯಾರ್ಥಿಗಳು ಎಲ್ಲರೂ ಸಣ್ಣ ವಯಸ್ಸಿನಿಂದಲೇ 'ಸೋಮಾರಿತನ' ಎನ್ನುವುದು ಒಂದು ದೊಡ್ಡ ರೋಗವೆಂದು ಅದನ್ನು ಹತ್ತಿರ ಬರಗೂಡದೆಂದು ಮನದಟ್ಟು ಮಾಡಿಕೊಳ್ಳಲು ಇರುವ ಬಹುಮೂಲ್ಯ ಸಾಧನ ಈ ಕಥೆಗಳು. ಕಥೆಗಳಾದ 'ಮಾತಿನ ಮಲ್ಲಿ, ಮುಂಜಾವಿನ ಮಂಜು, ಬಡಾಯಿಕೋರರು, ಮೀನಿನ ಬಲೆ, ಸೋಮಾರಿ ಲಕ್ಷ್ಮಣ ಮೊದಲಾದವು ಇದಕ್ಕೆ ಸಂಬಂಧಿಸಿದ್ದು, ಮಕ್ಕಳಲ್ಲಿ 'ಸೋಮಾರಿತನ' ಹತ್ತಿರ ಸುಳಿಯದಂತೆ ಮಾಡುವಲ್ಲಿ ಸಹಕಾರಿಯಾಗಿವೆ. ಅವುಗಳಲ್ಲಿ 'ಬಡಾಯಿಕೋರರ ಮತ್ತು ಮೀನಿನ ಬಲೆ' ಕಥೆಗಳ ವಿಶ್ಲೇಷಣೆಯೊಂದಿಗೆ 'ಸೋಮಾರಿತನದ ಪರಿಣಾಮದ ಬಗ್ಗೆ ಹಾಗೂ ಕಥೆಯಲ್ಲಿನ ಅದರ ಸಾಧ್ಯತೆಗಳನ್ನೂ ತಿಳಿಸಲಾಗಿದೆ.

**೩. ಬಡಾಯಿಕೋರರು:** ರಾಜ ವಸುಷೇಣ ವಲ್ಲಭಿ ದೇಶವನ್ನು ಆಳುತ್ತಿದ್ದ. ಆತ ತುಂಬಾ ಕರುಣಾಳು ಮತ್ತು ಒಳ್ಳೆಯ ರಾಜ. ಸುವರ್ಣಗಿರಿ ಅವನ ಆಳ್ವಿಕೆಯಲ್ಲಿದ್ದ ಫಲವತ್ತಾದ ಭೂಮಿಯಿರುವ ಒಂದು ಹಳ್ಳಿ. ಸ್ವಲ್ಪ ಶ್ರಮ ವಹಿಸಿದರೂ ಒಳ್ಳೆಯ ಬೆಳೆ ಸಿಗುತ್ತಿತ್ತು. **ಸೋಮಾರಿ ಮತ್ತು ಹರಟೆ ಹೊಡೆಯುವುದರಲ್ಲಿ ನಿಪುಣರಾದ** ಅಲ್ಲಿನ ಜನರು ಬೆಳಗ್ಗೆ ಎದ್ದು ಒಂದು ಅರಳಿಮರದ ಕಟ್ಟೆಯಲ್ಲಿ ಹರಟಲು ಕೂತರೆ, ಮದ್ಯಾಹ್ನ ರಾತ್ರಿ ಊಟದ ಸಮಯದಲ್ಲಿ ಮಾತ್ರ ಬಿಡುವು. ಇದರಿಂದ ಬೇಸೆತ್ತ ಅಲ್ಲಿನ ಹೆಂಗಸರು ರಾಜನಿಗೆ ದೂರು ಕೊಟ್ಟರು. ಆದರೆ ರಾಜ ಯಾವುದೇ ಪ್ರತಿಕ್ರಿಯೆಯನ್ನು ತಕ್ಷಣಕ್ಕೆ ತೋರಿಸದಕ್ಕೆ ಬೇಸರಗೊಂಡರು.

ಒಂದು ಬೇಸಿಗೆಯ ಹುಣ್ಣಿಮೆ ರಾತ್ರಿಯಲ್ಲಿ ಗಂಡಸರು ಎಂದಿನಂತೆ ಹರಟೆ ಹೊಡೆಯುತ್ತಿದ್ದಾಗ, ನೋಡಲು ಎತ್ತರ, ಸುಂದರವಾಗಿದ್ದ ಆಗಂತುಕನು ಅಲ್ಲಿಗೆ ಬಂದನು. ಈತನನ್ನು ನೋಡಿದ ತಕ್ಷಣ ಬಡಾಯಿಕೋರರು ಉತ್ಸಾಹದಿಂದ ಒಂದೊಂದು ಬಡಾಯಿ ಕೋರಲು ಪ್ರಾರಂಭಿಸಿದರು. ನಾಲ್ಕು ಗುಂಪಿನಲ್ಲಿದ್ದ ಪ್ರತಿಯೊಬ್ಬ ನಾಯಕರು ರಾಜನನ್ನು "ತಾಯಿ ಗರ್ಭದಿಂದ ಹೊರಬಂದ ಕೂಡಲೆ ಬೇಟಿ ಮಾಡಿದೆ ಎಂದು,

ಹುಟ್ಟಿದ ಮರುದಿನವೇ ವಲ್ಲಭಿಗೆ ಹೋಗಿ ರಾಜ ವಸುಷೇಣನೊಂದಿಗೆ ತಿಂಡಿ ತಿಂದೆ ಎಂದು, ಒಂದು ವಾರದಲ್ಲಿ ಆನೆ ಮೇಲೆ ವಲ್ಲಭಿಗೆ ಹೋಗಿ ರಾಜನೊಡನೆ ಊಟ ಮಾಡಿದೆ ಎಂದು, ಒಂದು ತಿಂಗಳ ಮಗುವಾಗಿದ್ದಾಗ ನಾನು ವಲ್ಲಭಿಗೆ ಹಕ್ಕಿಯಂತೆ ಹಾರಿಕೊಂಡು ಹೋದೆ ಎಂದು ಹೇಳಿದಾಗ, ಇದನ್ನು ಕೇಳಿದ ಗುಂಪಿನ ಜನರು ಕೇಕೇ ಹಾಕುತ್ತಾ ಚಪ್ಪಾಳೆ ಹೊಡೆದು ಸಂತೋಷ ವ್ಯಕ್ತಪಡಿಸಿದರು. ಅಲ್ಲಿ ನೆರೆದಿದ್ದ ಆಗಂತುಕನು "ನೀವೆಲ್ಲರು ರಾಜನನ್ನು ಮೊದಲೇ ಭೇಟಿಯಾಗಿದ್ದೀರಲ್ಲವೇ?" ಎಂದನು. ಅದಕ್ಕೆ ಅವರು ಒಪ್ಪಿಗೆಯನ್ನು ಸೂಚಿಸಿದಾಗ ಹೀಗೆ ಹೇಳುವನು. "ನಾನು ವಲ್ಲಭಿಯಿಂದ ಬಂದಿದ್ದೇನೆ. ಅಲ್ಲಿ ಕೋಟೆ ಕಟ್ಟಬೇಕಾಗಿತ್ತು. ಹೀಗಾಗಿ ಗಟ್ಟಿಮುಟ್ಟಾದ ಬಲಶಾಲಿಗಳ ಅಗತ್ಯವಿತ್ತು. ಅದರಂತೆ ನಾಲ್ಕು ಜನ ಅಸಾಮಾನ್ಯರನ್ನು ಹುಡುಕಿ ಚಿನ್ನದ ನಾಣ್ಯಗಳನ್ನು ಅವರಿಗೆ ಮುಂಗಡವಾಗಿ ನೀಡಿದ್ದೆ. ಈಗ ಬರುತ್ತೇವೆ ಎಂದು ಹೋದವರು ಈಗ ಸಿಕ್ಕಿದ್ದಾರೆ. ನೀವೇ ಆ ನಾಲ್ಕು ಜನ" ಎಂದು ಗುಂಪಿನ ನಾಯಕರನ್ನೇ ಹಿಡಿದು "ನನ್ನ ಮುಂಗಡ ಕೊಡಿ ಇಲ್ಲವೇ ಕೆಲಸಕ್ಕೆ ಬನ್ನಿ" ಎಂದು ಹೆದರಿಸುತ್ತಾ, ತಾನು ಹೊದ್ದಿದ್ದ ಶಾಲನ್ನು ತೆಗೆದನು. ಅವನು ಬೇರಾರೂ ಆಗಿರದೆ ರಾಜ ವಸುಷೇಣನಾಗಿದ್ದ. ನಂತರ ಬಡಾಯಿಕೋರರು ಅವನಿಗೆ ಎರಗಿ ಕ್ಷಮೆಯನ್ನು ಕೇಳಿ, ಮುಂದೆ ಎಂದೂ ತಾವು **ಬಡಾಯಿಗೆ ಕೂತು ಸೋಮಾರಿಗಳಂತೆ ಸಮಯವನ್ನು ವ್ಯರ್ಥ ಮಾಡುವುದಿಲ್ಲ** ಎಂದರು.

ಈ ರೀತಿ 'ಸೋಮಾರಿತನ'ವನ್ನು ತೊಲಗಿಸುವಲ್ಲಿ ರಾಜನು ಚತುರತೆಯಿಂದ ಉಪಾಯವನ್ನು ಮಾಡಿ ಸೋಮಾರಿ ಪ್ರಜೆಗೆ ತಮ್ಮ ತಪ್ಪಿನ ಅರಿವನ್ನು ಮಾಡಿಸಿದ. ಜೊತೆಗೆ ರಾಜನ ಬಗ್ಗೆ ಸುಳ್ಳು ಹೇಳಿ ಜನರನ್ನು ಮೋಸಗೊಳಿಸಿದ್ದಕ್ಕೆ ಶಿಕ್ಷೆಯನ್ನು ಅನುಭವಿಸುವ ಸಾಧ್ಯತೆಯನ್ನು ತೊಲಗಿಸಿ, ಕ್ಷಮಾಪಣೆ ನೀಡಿ ಕರುಣೆಯ ಮೌಲ್ಯಕ್ಕೂ ನಿದರ್ಶನನಾದನು.

**೪. ಮೀನಿನ ಬಲೆ: ಕೇಶವ ತುಂಬಾ 'ಸೋಮಾರಿ'**. ಕೆಲಸಗಳ್ಳ, ಅಲ್ಲದೆ ವಂಚಕ ಬೇರೆ. ಜನರು ಕೇಶವನನ್ನು ದಾರಿಯಲ್ಲಿ ನೋಡಿದರೆ ಆ ದಾರಿಬಿಟ್ಟು ಬಳಸುದಾರಿಯಿಂದ ಹೋಗುತ್ತಿದ್ದರು. ಸೋಮಾರಿತನ ಅವನ ವ್ಯಕ್ತಿತ್ವದ ಮೇಲೆ ಎಷ್ಟು ಹಾವಿಯಾಗಿತ್ತೆಂದರೆ, ಜನರು ಅವನ ಹತ್ತಿರ ಸುಳಿಯಲು, ಅವನೊಂದಿಗೆ ಮಾತನಾಡಲು ಹಿಂದು ಮುಂದು ನೋಡುತ್ತಿದ್ದರು. ಒಂದು ದಿನ ಕೇಶವ ಕೆರೆಯದಂಡೆಯ ಮೇಲೆ ಮಲಗಿ ಆಕಾಶ ನೋಡುತ್ತಾ ತಾನು ಶ್ರೀಮಂತನಾದರೆ ಆಗುವ ಅನುಕೂಲವನ್ನು ಲೆಕ್ಕ ಹಾಕುತ್ತಾ, ಸಿರಿವಂತನಾಗುವುದು ಹೇಗೆ ಎಂದು ಯೋಚಿಸುತ್ತಿದ್ದ. ವ್ಯಾಪಾರ ಮಾಡಿದರೆ ಬೇಗ ಶ್ರೀಮಂತನಾಗಬಹುದು. ಆದರೆ ಒಬ್ಬನೇ ವ್ಯಾಪಾರ ಮಾಡಿದರೆ ಎಲ್ಲಾ ಕೆಲಸ ತಾನೇ

ಮಾಡಬೇಕು ಎನ್ನುವ ವಿಚಾರದಿಂದ ಬೇಸರಗೊಂಡನು. ಯಾರಾದರೂ ಪಾಲುದಾರರು ಸಿಕ್ಕರೆ ಅವನನ್ನು ಚೆನ್ನಾಗಿ ದುಡಿಸಿ ತಾನು ದುಡ್ಡು ಮಾಡಬಹುದೆಂದು ಸಂತೋಷಗೊಂಡನು. ಇದಕ್ಕಾಗಿ ದ್ಯಾಮಣ್ಣ ಮತ್ತಿತರ ಊರಿನ ಜನರನ್ನು ಕೇಳಲಾಗಿ, ಕೇಶವನ ಸ್ವಭಾವ ಅರಿತ ಅವರು ತಿರಸ್ಕರಿಸಿದಾಗ ಬೇಸರದಿಂದ ಕೇಶವನು ಬೇರೆ ಊರಿನ ದಾರಿ ಹಿಡಿದ. ಅಲ್ಲಿ 'ಮಾಧವನೆಂಬ' ಯುವಕನ್ನು ಭೇಟಿಯಾಗಿ ತನ್ನ ವ್ಯಾಪಾರದ ಯೋಚನೆಯನ್ನು ಹೇಳಿದನು. ಶಾಂತ ಸ್ವಭಾವದವನಾದ ಮಾಧವ ಅದಕ್ಕೆ ಒಪ್ಪಿ ಮೀನಿನ ವ್ಯಾಪಾರ ಮಾಡಲು ಇಬ್ಬರು ಸೇರಿ ನಿರ್ಧರಿಸಿದರು. ಸ್ವಭಾವದಂತೆ ಕೇಶವ ಯಾವುದೇ ಕೆಲಸ ಮಾಡದೆ, ಹುಲ್ಲನ್ನು ಕುಯ್ಯುವುದರಿಂದ ಹಿಡಿದು, ಮೀನು ಬಲೆ ತಯಾರಿಸಿ ಮೀನನ್ನು ಹಿಡಿಯುವವರೆಗೂ ಎಲ್ಲಾ ಕಲಸವನ್ನು ಮಾಧವನಿಂದ ಮಾಡಿಸಿ, ಹಿಡಿದ ಮೀನುಗಳನ್ನು ಮಾತ್ರ ತಾನು ಒಯ್ಯುತ್ತಿದ್ದನು.

ಮಾಧವನು ಕೇಶವನ ದಬ್ಬಾಳಿಕೆಯನ್ನು ಎರಡು ದಿನ ಸಹಿಸಿಕೊಂಡು ಮೂರನೆಯ ದಿನ " ನಿಮ್ಮ ಊರಲ್ಲಿರುವ ಹೊಂಡ ಸರಿ ಇಲ್ಲ. ನಮ್ಮ ಊರಲ್ಲಿ ಇನ್ನೂ ಚೆನ್ನಾಗಿ ಮೀನು ಸಿಕ್ಕುವ ಹೊಂಡ ಇದೆ. ನೀನು ಅಲ್ಲಿಗೆ ಬಾ. ನಮ್ಮ ವ್ಯಾಪಾರ ಅಲ್ಲಿಂದಲೇ ಮಾಡೋಣ" ಎಂದು ತನ್ನೂರಿಗೆ ಕರೆದುಕೊಂಡು ಹೋದನು. ಅಲ್ಲಿ ಕೇಶವನಂತೆ ಮಾದವ ಆತನಿಂದ ಎಲ್ಲಾ ಕೆಲಸವನ್ನು ಮಾಡಿಸಿ, ಕೊನೆಗೆ ಮೀನಿನ ಬಲೆ ಮಾತ್ರ ಅವನಿಗೆ ಸಿಗುವಂತೆ ಮಾಡಿದ. ಸಿಕ್ಕ ಮೀನಿನ ಬಲೆಯನ್ನು ಮಾರಲು ಕೇಶವ ಪೇಟೆಗೆ ತೆಗೆದುಕೊಂಡು ಹೋದಾಗ, ಅಲ್ಲಿನ ಜನರು ಇವನನ್ನು ಹುಚ್ಚನೆಂದು ಮೂರು ದಿನದ ಕೊಳೆತ ಹುಲ್ಲಿನ ಬಲೆಯನ್ನು ಯಾರು ಕೊಳ್ಳುತ್ತಾರೆ ಎಂದು ಬೈದು ಕಳುಹಿಸುವರು. ಹೀಗೆ ಸೋಮಾರಿತನದಿಂದ ಗಳಿಸಿದಕ್ಕಿಂತ ಅನುಭವಿಸುವ ನಷ್ಟವೇ ಅಧಿಕವಾದುದೆಂಬುದು ಕೇಶವನಿಗೆ ಮನವರಿಕೆಯಾಗಿ ಅಂದಿನಿಂದ **ಸೋಮಾರಿತನವನ್ನು ಬಿಟ್ಟು ಮೈಬಗ್ಗಿಸಿ ದುಡಿಯಲು ಪ್ರಾರಂಭಿಸಿದನು.**

ಪ್ರಸ್ತಾಪಿಸಿದ ಎರಡೂ ಕಥೆಗಳು ಸೋಮಾರಿತನದ ಪ್ರಭಾವ ಹಾಗೂ ಅದರ ಪರಿಣಾಮದ ಬಗ್ಗೆ ಮನೋಜ್ಞವಾಗಿ ಚಿತ್ರಿತಗೊಂಡಿದ್ದು, ಮಕ್ಕಳಲ್ಲಿ ಸೋಮಾರಿತನ ರೂಡಿಯಾಗದಂತೆ ಮಾಡಲು ಸಹಕಾರಿಯಾದ ಕಥೆಗಳಾಗಿವೆ. ಅಲ್ಲದೆ ಸೋಮಾರಿತದಿಂದಾಗಿ ತಮ್ಮ ದೇಹವು ತನ್ನ ಚುರುಕತೆಯನ್ನು ಕಳೆದುಕೊಂಡು, ತಮ್ಮಲ್ಲಿರುವ ಬಹಳಷ್ಟು ಮೌಲ್ಯಗಳ ಕ್ರಿಯಾತ್ಮಕ ಕಾರ್ಯಚರಣೆಗೆ ತೊಂದರೆಯನ್ನುಂಟು ಮಾಡುವುದರ ಮನವರಿಕೆಯೂ ಗೋಚರಿಸಿರುವದನ್ನು ಕಥೆಗಳಲ್ಲಿ ಗಮನಿಸಲಾಗಿದೆ. ಜೊತೆಗೆ ಸೋಮಾರಿತನದ ಪರಿಣಾಮವನ್ನು ತಿಳಿಸಿ, ಜನರನ್ನು ಸುಧಾರಿಸಿದ ವಲ್ಲಭಿಯ ರಾಜ ವಸುಷೇಣ ಹಾಗೂ ತನ್ನ ಪಾಲುದಾರನನ್ನು ಸುಧಾರಿಸುವಲ್ಲಿ ಸಹಕರಿಸಿದ

ಮಾಧವ ಇಬ್ಬರೂ ಸೋಮಾರಿತನದ ಪ್ರಭಾವಕ್ಕೆ ಒಳಗಾಗದೆ '**ಚುರುಕುತನ, ಬುದ್ಧಿವಂತಿಕೆ, ಸಮಯ ಪ್ರಜ್ಞೆಯೆಂಬ ಹಲವು ಮೌಲ್ಯಗಳ ಸಮ್ಮಿಲನದೊಂದಿಗೆ ಉತ್ತಮ ವ್ಯಕ್ತಿತ್ವ ರೂಢಿಸಿಕೊಳ್ಳುವ ಪ್ರಸ್ತಾಪವಿದೆ. ಮಕ್ಕಳ ಮೇಲೆ ಕಥೆಯಲ್ಲಿ ಬಂದಿರುವ ಚುರುಕುತನ, ಬುದ್ಧಿವಂತಿಕೆ, ಸಮಯ ಪ್ರಜ್ಞೆ ಮೊದಲಾದ ಪೂರಕ ಮೌಲ್ಯಗಳನ್ನು ಬೆಳೆಸುವ ಸಾಧ್ಯತೆಯನ್ನೂ, **ಸಹವಾಸದಲ್ಲಿ ಇದ್ದಾಗ ತಾವು ಕೆಡುವ ಬದಲೂ ತಮ್ಮ ಸಹವಾಸದಲ್ಲಿರುವವರನ್ನು ಸುಧಾರಿಸಬೇಕು'** ಎಂಬ ಸಂದೇಶದ ಒಳ ಹೊಳಲನ್ನು ಈ ಕಥೆಗಳು ಹೇಳುತ್ತವೆ.

****

## ಮೂರ್ಖತೆ



"ಲಾಭದಾಯಕ ವಸ್ತುವನ್ನು ಒಗೆದು ಹಾನಿಕಾರಕ ವಸ್ತುವನ್ನು ಹಿಡಿದು ಕೊಳ್ಳುವುದು ಮೂರ್ಖತನವು" – **ತಿರುವಳ್ಳುವರ್.**

"ಒಬ್ಬನ ಮೂರ್ಖತೆಯಿಂದ ಇನ್ನೊಬ್ಬನಿಗೆ ಲಾಭ" – **ಬೇಕನ್.**

"ಮೂರ್ಖರ ಸಹವಾಸವು ಅವಿವೇಕನ ಪರಂಪರೆಗೂ, ಸಜ್ಜನರ ಸಹವಾಸವು ಧರ್ಮ ಸಾಧನೆಗೂ ಕಾರಣವಾಗುತ್ತದೆ" – **ವಾಲ್ಮೀಕಿ.**

"ದಡ್ಡರಿಗೆ ದೊಣ್ಣೆ ಪೆಟ್ಟು, ಬುದ್ಧಿವಂತರಿಗೆ ಮಾತಿನ ಪೆಟ್ಟು" – **ಕನ್ನಡ ಗಾದೆ.**

"ಮೂರ್ಖರು ಜ್ಞಾನಿಗಳಿಂದ ಏನೂ ಕಲಿಯುವುದಿಲ್ಲ. ಜ್ಞಾನಿಗಳು ಮೂರ್ಖರಿಂದ ಬಹಳ ಕಲಿಯುತ್ತಾರೆ" – **ಡಚ್ ಗಾದೆ**

ಪ್ರಸ್ತುತ ಅನುಭವಿಗಳ ನುಡಿ, ಗಾದೆಯನ್ನು ಗಮನಿಸಿದರೆ, ಮೂರ್ಖತೆಯು ತನ್ನ ಪ್ರಭಾವಕ್ಕಿಂತ ಹೆಚ್ಚಾಗಿ ಪರಿಣಾಮವನ್ನು ವ್ಯಕ್ತಿಯ, ಕುಟುಂಬದ, ಸಮಾಜದ ಮೇಲೆ ಬೀರುತ್ತದೆ ಎಂಬುದು ಗೋಚರಿಸುತ್ತದೆ. ಮೂರ್ಖತೆಯಿಂದ ನಷ್ಟವೇ ಹೆಚ್ಚು. ಅನುಕೂಲ

ಬಹಳ ಕಡಿಮೆ ಎನ್ನುವಷ್ಟರ ಮಟ್ಟಿಗಿದೆ. ಹೀಗಾಗಿಯೇ ನಮ್ಮ ಹಿರಿಯರು ಮೂರ್ಖತೆ ಮಕ್ಕಳಲ್ಲಿ ಬೆಳೆಯದಂತೆ ಮಾಡಲು ನೀತಿಯುಕ್ತ ಕಥೆಗಳನ್ನು ಹೇಳುವ ಕಡೆ ಹೆಚ್ಚು ಒತ್ತು ನೀಡುತ್ತಿದ್ದರು. ಅಷ್ಟೇ ಅಲ್ಲದೆ ಚುರುಕಿನಿಂದ ಕೆಲಸ ಮೂಡುವಂತೆ ಮಾಡಲು ಮಕ್ಕಳ ನಡುವೆಯೇ ಸ್ಪರ್ಧೆಯನ್ನು ಏರ್ಪಡಿಸುವುದು. ಬೆಳಗಿನ ಜಾವ ಬೇಗ ಏಳುವಂತೆ ಮಾಡುವುದು, ಹೊಣೆಗಾರಿಕೆ ನಿಭಾಯಿಸುವಂತೆ ಹೇಳುವುದು ಮತ್ತಿತರ ವಿಧಾನಗಳನ್ನು ಅಳವಡಿಸಿಕೊಂಡು ಮಕ್ಕಳು ಚಿಕ್ಕಂದಿನಿಂದಲೇ ಉತ್ಸಾಹ, ಹುಮ್ಮಸ್ಸಿನಿಂದ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡಲಾಗುತ್ತಿತ್ತು. ಇಷ್ಟೆಲ್ಲ ವಿಧಾನವನ್ನು ಮೂರ್ಖತೆಯ ವಿರುದ್ಧ ಮಾಡಿದರೂ, ನೀತಿಯುಕ್ತ ಕಥೆಗಳ ಪಾತ್ರ ಮಾತ್ರ ಇವೆಲ್ಲಕ್ಕಿಂತ ಹಿರಿದಾದುದಾಗಿದೆ. 'ದಡ್ಡ ಪಂಡಿತ, ಅಂಧೇರಿ ನಗರ, ಮುವತ್ತು ಕುಸ್ತಿಗಳ ಸರದಾರ, ಮಹಾ ಮೂರ್ಖರು, ನೆರಳು ಮತ್ತು ದಡ್ಡ ಪಂಡಿತರು ಕಥೆಗಳು ಮಹತ್ವದಾಗಿದ್ದು, **ದಡ್ಡ ಪಂಡಿತರು ಮತ್ತು ಮಹಾ ಮೂರ್ಖರು'** ಕಥೆಯ ಮೂಲಕ ಮೂರ್ಖತೆಯ ಪರಮಾವಧಿಯನ್ನು ಹಾಗೂ ಅದರ ಸಾಧ್ಯತೆಯನ್ನು ವಿಶ್ಲೇಷಿಸಲಾಗಿದೆ.

**೫. ದಡ್ಡ ಪಂಡಿತರು** : ಕಥೆಯಲ್ಲಿ ಮೂರ್ಖತೆಯು ಯಾವ ಹಂತದವರೆಗೆ ಹೋಗುತ್ತದೆ ಎಂದರೆ ಕೊನೆಗೆ ತಮ್ಮ ಪ್ರಾಣವನ್ನೇ ಕಳೆದುಕೊಳ್ಳುತ್ತಾರೆ.

ಹಿರಿಯೂರಿನಲ್ಲಿ ನಾಲ್ಕು ಜನ ಅಣ್ಣ ತಮ್ಮಂದೀರು ಇದ್ದರು. ಅವರು ಅನೇಕ ವರ್ಷ ಬೇರೆ ಊರಿನ ಗುರುಕುಲದಲ್ಲಿ ಇದ್ದು ಅನೇಕ ವಿದ್ಯೆಗಳನ್ನು ಕಲಿತು ಬಂದಿದ್ದರು. ರಾಜಧಾನಿಗೆ ಹೋಗಿ ವಿದ್ಯೆಯನ್ನು ಪ್ರದರ್ಶಿಸಿ ಹಣ ಗಳಿಸಬೇಕೆಂದು ಕಾಡಿನ ಮಾರ್ಗವಾಗಿ ಕಾಲುನಡಿಗೆಯಲ್ಲಿ ಹೊರಟರು. ಸ್ವಲ್ಪ ದೂರ ಹೋಗುವಷ್ಟರಲ್ಲಿ **ಹಿರಿಯ ಪಂಡಿತ** ಒಂದು ಹೆಜ್ಜೆ ಗುರುತನ್ನು ನೋಡಿ ತನ್ನ ಜ್ಞಾನವನ್ನು ಅಲ್ಲಿ ಪರೀಕ್ಷಿಸಿದ. "ನಾನು ಹೆಜ್ಜೆಯ ಗುರುತನ್ನು ಕಂಡುಹಿಡಿಯುವಲ್ಲಿ ಪರಿಣಿತ. ಬರೀ ಹಿಜ್ಜೆಯನ್ನು ನೋಡಿ ಯಾವುದೋ ಪ್ರಾಣಿ ಅಥವಾ ಮನುಷ್ಯರನ್ನು ಗುರುತಿಸಬಲ್ಲೆ, ಎಂದು ಇದೊಂದು ಸಿಂಹದ ಹೆಜ್ಜೆ ಗುರುತು" ಎಂದ. **ಎರಡನೆಯವನು** ತಾನು ಭಾಷಾ ಪಂಡಿತ ತನಗೆ ಪಶು, ಪಕ್ಷಿ, ಕೀಟಗಳ ಭಾಷೆ ತಿಳಿದಿದೆ ಎಂದು, ಸಾಲಾಗಿ ಹೋಗುತ್ತಿದ್ದ ಇರುವೆ ಸಾಲಿನ ಬಳಿ ಕಿವಿ ಇರಿಸಿ "ಸಿಂಹ ಸತ್ತು ಹೋಗಿದೆಯಂತೆ ತುಂಬ ಮಾಂಸವಿದೆಯಂತೆ ನಮಗೆ ಹಬ್ಬವೇ ಹಬ್ಬ ಎಂದು ಮಾತನಾಡಿಕೊಳ್ಳುತ್ತಿವೆ" ಎಂದ. ಮೂರನೆಯವನು ಮತ್ತು ಇತರರು ಎರಡನೆಯವನ ಮಾತನ್ನು ಪರೀಕ್ಷಿಸಲು ಮುಂದೆ ಹೋದರು. ಅಲ್ಲಿ ನೋಡಿದರೆ ಸಿಂಹ ಬೇರೆ ಪ್ರಾಣಿಯೊಂದಿಗೆ ಕಾದಾಡುತ್ತಾ ಸತ್ತು ಬಿದ್ದಿತ್ತು. ಇದನ್ನು ಗಮನಿಸಿದ **ಮೂರನೆಯವನು** "ಬೇರೆಲ್ಲಾದರೂ ಬಿದ್ದಿದ್ದ ಪ್ರಾಣಿಯ ಭಾಗಗಳನ್ನು

ನೋಡುವ ವಿದ್ಯೆ ಕಲಿತಿದ್ದೇನೆ" ಎಂದು ದಿಕ್ಕಾಪಾಲಾಗಿ ಬಿದ್ದಿದ್ದ ಸಿಂಹದ ಎಲುಬಿನ ಚೂರನ್ನು ಒಟ್ಟು ಮಾಡಿದ. ಈ ಮೂವರ **ಮೂರ್ಖತೆಯನ್ನು ಮೀರಿದಂತಹದ್ದು** ಕೊನೆಯವನ ಮೂರ್ಖತೆ. "ಸಿಂಹದ ಎಲ್ಲಾ ಭಾಗಗಳು ಸಿಕ್ಕರೆ ನಾನು ಆ ಪ್ರಾಣಿಗೆ ಮತ್ತೇ ಜೀವವನ್ನು ತುಂಬಬಲ್ಲೆ" ಎಂದು, ಹಿಂದು ಮುಂದು ಯೋಚಿಸದೆ ಮಂತ್ರ ಹೇಳಿ ನೀರು ಚಿಮುಕಿಸಿಯೇ ಬಿಟ್ಟ. ಕೂಡಲೇ ಪ್ರಾಣ ಬಂದ ಹಸಿದಿದ್ದ ಸಿಂಹ ಗರ್ಜಿಸಿ ಎದ್ದು ನಿಂತು ಆ ನಾಲ್ವರನ್ನೂ ಕೊಂದು ತಿಂದು ಹಾಕಿತು. ಹೀಗೆ ತಮ್ಮ ವಿದ್ಯೆಯನ್ನು ಎಲ್ಲಿ ಹೇಗೆ ಯಾವಾಗ ಉಪಯೋಗಿಸಬೇಕು ಎಂಬ ಸಮಯ ಪ್ರಜ್ಞೆ ಇಲ್ಲದ ಈ ನಾಲ್ಕು ಜನರು ಮಹಾ ಮೂರ್ಖರಾಗಿದ್ದು, ತಮ್ಮ ವಿದ್ಯೆಯಿಂದಲೇ ಪ್ರಾಣ ಕಳೆದುಕೊಳ್ಳುವ ಸ್ಥಿತಿಗೆ ತಲುಪಿದರು. ಇದೊಂದು ಮೂರ್ಖತೆಗೆ ಹೇಳಿ ಮಾಡಿಸಿದ ಕಥೆಯಾಗಿದ್ದು, **ಮೂರ್ಖತನದ** ದುಷ್ಪರಿಣಾಮದ ಬಗ್ಗೆ ಮಕ್ಕಳಿಗೆ ತಿಳಿಸುವಲ್ಲಿ ಮೌಲ್ಯಯುತ ಕಥೆಯಾಗಿರುವುದು ಕಂಡು ಬರುತ್ತದೆ.

**೬. ಮಹಾ ಮೂರ್ಖರು:** ಕಥೆಯ ಶೀರ್ಷಿಕೆಯೇ ಹೇಳುತ್ತದೆ ಕಥೆಯಲ್ಲಿನ ಮುಖ್ಯ ಪಾತ್ರವು ಕೇವಲ ಮೂರ್ಖನಲ್ಲ, ಮಹಾ ಮೂರ್ಖಳೆಂದು. ಕಥೆಯಲ್ಲಿನ ಮುಖ್ಯ ಪಾತ್ರ **ಗುಂಡಮ್ಮ** ಬುದ್ಧಿಯಲ್ಲಿ ಸೊನ್ನೆ. ಯಾರು ಏನೇ ಹೇಳಿದರು ನಂಬಿ ಬಿಡುತ್ತಿದ್ದಳು. ಅವಳ ಗಂಡ ಗುಂಡಪ್ಪ. ಅವಳಿಗೆ ಎಷ್ಟೇ ಬುದ್ದಿ ಹೇಳಿದರೂ ಅವಳ ತಲೆಗೆ ಹೋಗುತ್ತಿರಲಿಲ್ಲ. ಗುಂಡಮ್ಮನ ದಡ್ಡತೆಯನ್ನು ಗಮನಿಸಿದ ಜನರು ಅವಳನ್ನು ಮೋಸಗೊಳಿಸಲು ಸಮಯ ಕಾಯುತ್ತಿದ್ದರು. ಒಬ್ಬ ಬೈರಾಗಿಯು ಅವಳ ಮೂರ್ಖತೆಯನ್ನು ಗಮನಿಸಿ ಸುಲಭವಾಗಿ ಮೋಸಗೊಳಿಸಬಹುದೆಂದು ಬಂದವನೇ "ಗುಂಡಮ್ಮಾ ನಿಮ್ಮ ಮಾವನನ್ನು ನೋಡಿ ತುಂಬಾ ದುಃಖವಿನಿಸಿತು" ಎಂದು ತಾನು ಕೈಲಾಸದಿಂದ ಬಂದಿರುವುದಾಗಿ ಹೇಳಿದನು. ಯಾರಾದರೂ ಕೈಲಾಸಕ್ಕೆ ಹೋಗಿ ಬರಲು ಸಾಧ್ಯವೇ ಅದು ಇಂತಹ ಕಲಿಯುಗದಲ್ಲಿ. ಆದರೆ ನಮ್ಮ ಗುಂಡಮ್ಮ ಅದನ್ನು ನಂಬಿ, ತನ್ನ ಮಾವನಿಗೆ ಸಹಾಯವಾಗಲೆಂದು ಬಟ್ಟೆ ಮತ್ತು ಹಣವನ್ನು ಬೈರಾಗಿಗೆ ಕೊಟ್ಟು ಕಳುಹಿಸುವಳು. ಇವಳಿಂದ ವಸ್ತು ಹಣವನ್ನು ಪಡೆದ ಬೈರಾಗಿಯು ಹಿಂದೆ ಮುಂದೆ ತಿರುಗಿ ನೋಡದೆ ಸಂತೋಷದಿಂದ ಅಲ್ಲಿಂದ ಹೋಗುವನು.

ಗಂಡ ಬಂದ ನಂತರ ಈ ವಿಚಾರವನ್ನು ತಿಳಿಸಿದಾಗ ಅವಳ ಸ್ವಭಾವಕ್ಕೆ ಸಿಟ್ಟುಗೊಂಡು "ನಿನಗಿಂತ ದಡ್ಡರು ಸಿಗುವವರೆಗೆ ನಾನು ಮನೆಗೆ ಬರುವುದಿಲ್ಲವೆಂದು" ಹೇಳಿ ಕೋಪದಿಂದ ಮನೆಬಿಟ್ಟು ಹೋಗುವನು. ಮನೆಬಿಟ್ಟು ಹೋದ ಗುಂಡಪ್ಪನಿಗೆ ದಾರಿಯಲ್ಲಿ ಒಬ್ಬ ಹೆಣ್ಣು ಮಗಳು "ಮರದ ಮೇಲಿನ ಕೋತಿ ನನಗೆ ಮಗುವಾದಾಗ ನನ್ನ ಮಗುವನ್ನು ತನ್ನ ಮಗು ಎಂದು ಎತ್ತಿಕೊಂಡು ಹೋದರೆ" ಎಂದು ಅಳುತ್ತಿದ್ದಳು.

ಇದನ್ನು ಗಮನಿಸಿದ ಅವಳ ತಾಯಿಯು ವಿಷಯ ಕೇಳದೆ ಅವಳೂ ಅಳುತ್ತಿರುವುದನ್ನು ನೋಡಿದನು. ನಂತರ ಮೂವರು ತಮ್ಮ ಕಾಲುಗಳನ್ನು ಒಂದಕ್ಕೊಂದು ಹೆಣೆದುಕೊಂಡು ಬಿಡಿಸಲು ತಿಳಿಯದೆ "ಈ ನೆಲದಲ್ಲಿ ಏನೋ ವಿಶೇಷವಿದೆ" ಎಂದು ಅಳುತ್ತಿದ್ದುದನ್ನೂ, ಒಬ್ಬ ಕೊಂಬೆಯ ಮೇಲೆ ಕುಳಿತುಕೊಂಡು ತಾನು ಕುಳಿತಿದ್ದ ಕೊಂಬೆಯನ್ನೇ ತಾನು ಪ್ರಯಾಸವಿಲ್ಲದೆ ಕೆಳಗೆ ಬರಬಹುದೆಂದು ಕಡಿಯುತ್ತಿದ್ದುದನ್ನೂ ನೋಡಿದನು. ಇವರನ್ನೆಲ್ಲಾ ನೋಡಿದ ಮೇಲೆ ಗುಂಡಪ್ಪ "ಜಗತ್ತಿನಲ್ಲಿ ಜಾಣರು-ದಡ್ಡರು, ಉತ್ತಮರು-ಕೆಡುಕರು ಹೀಗೆ ಎಲ್ಲಾ ರೀತಿಯ ಜನ ಸಿಗುತ್ತಾರೆ. ದಡ್ಡತನ ಮತ್ತು ಕೆಡುಕುತನದ ನಿವಾರಣೆಗೆ ಉಪಾಯವನ್ನು ಮಾಡಬೇಕೆಂದು" ಸಮಾಧಾನ ಮಾಡಿಕೊಂಡು ಮನೆಗೆ ಹಿಂತಿರುಗಿ ಬಂದನು.

**"ಜಾಣನಿಗೆ ಮಾತಿನ ಪೆಟ್ಟು. ದಡ್ಡನಿಗೆ ದೊಣ್ಣೆ ಪೆಟ್ಟು"** ಎಂಬಂತೆ ದಡ್ಡತನ, ಮೂರ್ಖತೆ ಎಂಬುದು ಸಾಮಾನ್ಯ ಮಾತಿನಿಂದ ಸುಧಾರಣೆಗೆ ಒಳಪಡುತ್ತದೆ ಎಂಬುದು ಕಷ್ಟ ಅಸಾಧ್ಯ ಎಂಬ ಅಂಶವು ಕಥೆಯಲ್ಲಿ ಮನೋಜ್ಞವಾಗಿ ಮೂಡಿಬಂದಿದೆ. ಅಲ್ಲದೆ, ಚಿತ್ರಿಸಿದ ಎರಡೂ ಕಥೆಗಳಲ್ಲೂ ಮೂರ್ಖತನದ ಪರಮಾವಧಿಯ ಬಗ್ಗೆ ಉತ್ತಮವಾಗಿ ಚಿತ್ರಿಸಲಾಗಿದ್ದು, ಮಕ್ಕಳಿಗೆ ಮೂರ್ಖತನದ ಬಗ್ಗೆ ತಿಳಿಸುವಲ್ಲಿ ಪರಿಣಾಮಕಾರಿಯಾದುದು ಎಂದು ತಿಳಿದುಕೊಳ್ಳಲಾಗಿದೆ. **ಮಹಾ ಮೂರ್ಖರು** ಕಥೆಯಲ್ಲಿ ಕೇವಲ ಮೂರ್ಖತೆಯ ಪರಿಣಾಮ ಮಾತ್ರವಲ್ಲದೆ 'ಎಲ್ಲಾ ರೀತಿಯ ಜನರ ಬಗ್ಗೆಯೂ, ಅವರ ದಡ್ಡತನವನ್ನು ನಿವಾರಿಸುವ ಬಗ್ಗೆಯೂ ತಿಳಿಸಲಾಗಿರುವುದು', ಒಂದು ಮೌಲ್ಯದ ಬೋಧನೆಯೊಂದಿಗೆ ಇತರ ಪೂರಕ ಮೌಲ್ಯಗಳ ಬೋಧನೆಯೊಂದಿಗೆ ಮೂರ್ಖತನವನ್ನು ನಿವಾರಿಸುವ ಮೂಲಕ ಜೀವನಸೆಲೆಯನ್ನು ಸಾಗಿಸುವ ಪ್ರಕ್ರಿಯೆಯನ್ನು ತಿಳಿಸಿರುವುದು ಗೋಚರಿಸುತ್ತಿದೆ.

****

## ಅತಿಯಾಸೆ



ಭಗವಂತನು ಎಲ್ಲಾ ಜೀವಿಗಳ ಜೀವನಾಧಾರ ಬೆಳಕು, ಗಾಳಿ ಹಾಗೂ ಸ್ಥಳದ ವ್ಯವಸ್ಥೆ ಮಾಡಿದ್ದಾನೆ. ಅವನ ಅಗತ್ಯಕ್ಕೆ ತಕ್ಕಂತೆ ಎಷ್ಟು ಬೇಕೋ ಅಷ್ಟನ್ನು ಆರೋಗ್ಯದ

ದೃಷ್ಟಿಯಿಂದ ಉಪಯೋಗಿಸುವ ನಿಯಮವನ್ನು ಮಾಡಿದ್ದಾನೆ. ಉದಾಹರಣೆಗೆ, ಒಬ್ಬ ಮನುಷ್ಯ ಉಪ್ಪು ಅಥವಾ ಸಕ್ಕರೆ ಭಂಡಾರದಿಂದ ಎಷ್ಟಾದರೂ ಉಪ್ಪು ಅಥವಾ ಸಕ್ಕರೆಯನ್ನು ಸಂಗ್ರಹಿಸಬಹುದು. ಆದರೆ ಬೇಕಾಗಿದ್ದಕ್ಕಿಂತ ಹೆಚ್ಚು ಉಪ್ಪು ಅಥವಾ ಸಕ್ಕರೆಯನ್ನು ತೆಗೆದುಕೊಳ್ಳಲಾರ. ಅವನೇನಾದರೂ ಹೆಚ್ಚು ಉಪ್ಪನ್ನು ಅಡುಗೆಗೆ ಹಾಕಿದರೆ, ಇಡೀ ಅಡುಗೆ ಹಾಳುಮಾಡಿದಂತಾಗುತ್ತದೆ. ಅದೇ ರೀತಿಯಲ್ಲಿ ಕಡಿಮೆ ಉಪ್ಪನ್ನು ಹಾಕಿದರೆ, ಅಡುಗೆಯ ರುಚಿ ಸಪ್ಪೆಯಾಗಿ ರುಚಿ ಇಲ್ಲದಂತಾಗುತ್ತದೆ. ಮತ್ತೊಂದು ಕಡೆ ಅಗತ್ಯಕ್ಕೆ ತಕ್ಕಷ್ಟು ಉಪ್ಪು ಹಾಕಿದರೆ ಅಡುಗೆ ರುಚಿಯಾಗಿರುತ್ತದೆ ಮತ್ತು ಆರೋಗ್ಯಕ್ಕೆ ಒಳ್ಳೆಯದು. ಅಲ್ಲದೆ ಅಗತ್ಯಕ್ಕಿಂತ ಹೆಚ್ಚು ಉಪ್ಪು ಆರೋಗ್ಯಕ್ಕೆ ಹಾನಿಕರ. ಇದೇ ರೀತಿ ಅಗತ್ಯಕ್ಕಿಂತ ಹೆಚ್ಚು ಧನ, ಆಸ್ತಿಯ ಹೆಬ್ಬಯಕೆಯು ನಮ್ಮ ಎಲ್ಲಾ ಪ್ರಗತಿಗೆ ಹಾನಿಕರವಾಗಿದ್ದು, ಪ್ರಕೃತಿಯ ನಿಯಮಕ್ಕೆ ವಿರುದ್ಧವಾಗಿರುತ್ತದೆ. ಇದು ನಮ್ಮನ್ನು ಹಾಳು ಮಾಡುತ್ತದೆ.

ಇಂದು ನಾವು ಲೋಭ ತಾಂಡವಾಡುತ್ತಿರುವ ಲೋಕದಲ್ಲಿದ್ದೇವೆ. ಇಂದಿನ ತಲೆಮಾರಿನವರು ಬಾಳುತ್ತಿರುವುದು ಕೊನೆಯಿಲ್ಲದ ಬಯಕೆಗಳ ಚಕ್ರವ್ಯೂಹದಲ್ಲಿ. ಮಿತಿಯಿಲ್ಲದ ಬೇಡಿಕೆಗಳಿಂದ ತುಂಬಿದ ಪರಿಸ್ಥಿತಿಯಲ್ಲಿ ಹೊಳೆಯಲ್ಲಿ. ಬಹುಮಾಧ್ಯಮಗಳಲ್ಲಿ ಪ್ರಕಟವಾಗುವ ಅದೆಷ್ಟೋ ಆಕರ್ಷಣೀಯ ವಸ್ತುಗಳ ಜಾಹೀರಾತುಗಳು ಮಕ್ಕಳ ತಲೆಯಲ್ಲಿ ಅತಿಯಾಸೆಯ ಪೆಡಂಭೂತವನ್ನು ಸ್ಥಾಪಿಸುತ್ತಿವೆ. ಈ ಪೆಡಂಭೂತದಿಂದ ನಮ್ಮ ಮಕ್ಕಳನ್ನು ಕಾಪಾಡುವಲ್ಲಿ ಸಾಮಾನ್ಯ ಬುದ್ಧಿಮಾತು ಅಪ್ರಯೋಜಕ. ಅದಕ್ಕೆ ಕಥೆಯಿಂದ ಉತ್ತಮ ಸಾಧನ ಮತ್ತೊಂದಿಲ್ಲ. ತಿದ್ದಿ ತೀಡುವ ಕಥೆಗಳಿಂದ ಇದು ಸಾಧ್ಯವಾದುದನ್ನು ಕಾಣಬಹುದಾಗಿದೆ. 'ನ್ಯಾಯಾದೀಶನ ನ್ಯಾಯ, ತೃಪ್ತಿ, ಚಿನ್ನದ ಚಪ್ಪಲಿ, ಅತಿಯಾಸೆ ಗತಿ ಕೇಡು, ಚಿತ್ರಗಾರ, ಕೋಳಿಯ ಲೆಕ್ಕ, ಇನ್ನೊಬ್ಬರ ಮೇಲೆ ತಪ್ಪು, ದೇವ ಸುಂದರಿ, ಮೂರು ಅಕ್ಕಿಕಾಳು, ರತ್ನದ ಮಳೆ, ಕೂಡಿಡುವ ಆಸೆ' ಇತ್ಯಾದಿ ಕಥೆಗಳು **ಲೋಭ** ನಿಷೇಧಾತ್ಮಕ ಮೌಲ್ಯ, **ಹಂಚಿಕೆ** ಧನಾತ್ಮಕ ಮೌಲ್ಯವಾದುದನ್ನು ತಿಳಿಸುತ್ತವೆ. 'ಇನ್ನೊಬ್ಬರ ಮೇಲೆ ತಪ್ಪು ಮತ್ತು ಚಿನ್ನದ ಚಪ್ಪಲಿ'ಯ ಕಥೆಯನ್ನು ಪ್ರಸ್ತಾಪಿಸುವುದರೊಂದಿಗೆ ಅತಿಯಾಸೆಯ ದುಷ್ಪರಿಣಾಮವನ್ನು ವಿಶ್ಲೇಷಿಸಲಾಗಿದೆ.

**೭.ಇನ್ನೊಬ್ಬರ ಮೇಲೆ ತಪ್ಪು:** ಕುಂತಳ ದೇಶದ ರಾಜಕುಮಾರಿ ಚಂಪಕಗಂಧಿ ತುಂಬಾ ರೂಪವಂತಳು. ಅದಕ್ಕೂ ಮಿಗಿಲಾಗಿ ಆಭರಣವೆಂದರೆ ಬಹಳ ಪ್ರೀತಿ. ಎಷ್ಟೇ ಆಭರಣ **ಶೇಖರಿಸಿದರೂ ಮತ್ತಷ್ಟು ಬೇಕೆಂಬ ಆಸೆ.** ಆದ್ದರಿಂದ ದೇಶವಿದೇಶಗಳಿಂದ ರತ್ನಪಡಿ

ವ್ಯಾಪಾರಿಗಳು ವಿವಿಧ ಆಭರಣಗಳನ್ನು ತಂದು ಹೆಚ್ಚಿನ ಬೆಲೆಗೆ ಅವರಿಗೆ ಮಾರುತ್ತಿದ್ದರು.

ಒಂದು ದಿನ ಶ್ರೀಪುರದ ವ್ಯಾಪಾರಿಯೊಬ್ಬ "ಇಂಥ ಚಂದ್ರಹಾರ ಎಲ್ಲಿಯೂ ಸಿಗುವುದಿಲ್ಲ" ಎಂದು ರಾಣಿಗೆ ನೀಡಿದಾಗ, ಅವಳು ಅದನ್ನು ಇಷ್ಟದಿಂದ ತನ್ನ ಕೊರಳಿಗೆ ಹಾಕಿಕೊಂಡಳು. ಸ್ನಾನಕ್ಕೆಂದು ಈಜು ಕೊಳಕ್ಕೆ ಹೋಗುವ ಮುನ್ನ ಹಾರ ವಸ್ತ್ರಾಭರಣಗಳನ್ನು ದಾಸಿಗೆ ನೀಡಿ ಸ್ನಾನ, ಈಜು ಮುಗಿಸಿ ಬರುವಷ್ಟರಲ್ಲಿ ಚಂದ್ರಹಾರ ಕಳುವಾಗಿತ್ತು. ದಾಸಿಯು ಶಿಕ್ಷೆಗೆ ಹೆದರಿ, ಯಾರೋ ಗೋಡೆ ಹಾರಿ ಹೋದರು ಎಂದು ಹೇಳಿದಳು. ರಾಜಭಟರು ಕಳ್ಳರನ್ನು ಹುಡುಕಿಕೊಂಡು ಹೋಗುತ್ತಿದ್ದಾಗ ಇವರನ್ನು ಕಂಡು ಹೆದರಿ ಓಡುತ್ತಿದ್ದ ರೈತನನ್ನು ಹಿಡಿದರು. ಆತನು ಜಮೀನ್ದಾರನ ಮೇಲೆ, ಜಮೀನ್ದಾರ ಅರ್ಚಕನ ಮೇಲೆ, ಅರ್ಚಕ ರಾಣಿಯ ಮೇಲೆ ತಪ್ಪು ಹೊರಿಸಿದರು. ರಾಣಿಯ ಅತಿಯಾಸೆಯಿಂದ ಮಾಡದ ತಪ್ಪನ್ನು ಒಬ್ಬರ ಮೇಲೆ ಮತ್ತೊಬ್ಬರು ಹೊರಿಸುತ್ತಾ ಹೋದರು. ಕೊನೆಯಲ್ಲಿ ಮಂತ್ರಿಯು ಆ ನಾಲ್ಕು ಜನ ನಿರಪರಾಧಿಗಳನ್ನು ಒಂದು ಕೋಣೆಯಲ್ಲಿರಿಸಿ ಅವರ ಮಾತನ್ನು ಕೇಳಿ ನಿರಪರಾಧಿಗಳೆಂದು ಗೊತ್ತಾಗಿ ಮತ್ತೇ ಹುಡುಕಲು ಹೋದಾಗ ಕೋತಿಯೊಂದು ಆ ಹಾರವನ್ನು ತೆಗೆದುಕೊಂಡಿರುವುದನ್ನು ಕಂಡರು. ಅದಕ್ಕೆ ಹಣ್ಣನ್ನು ನೀಡಿ ಆ ಹಾರವನ್ನು ಪಡೆದು ರಾಣಿಗೆ ನೀಡಲಾಯಿತು.

ಈ ರೀತಿ ರಾಜಕುಮಾರಿಯ **ಅತಿಯಾಸೆ**ಯಿಂದಾಗಿ ನಿರಪರಾಧಿಗಳಿಗೆ ಶಿಕ್ಷೆಯಾಗುವ ಸ್ಥಿತಿ ಒದಗಿತು. ಆದರೆ **ಬುದ್ಧಿವಂತ** ಮಂತ್ರಿಯಿಂದಾಗಿ ನಿಜಾಂಶ ತಿಳಿದು ನಿರಪರಾಧಿಗಳು ಶಿಕ್ಷೆಯಿಂದ ಪಾರಾದಂತಾಯಿತು.

**೮. ಚಿನ್ನದ ಚಪ್ಪಲಿ:** ಅವಂತಿಪುರದಲ್ಲಿ **ರೋಹಿತ** ತನ್ನ ವಿಧವೆ ತಾಯಿಯೊಂದಿಗೆ ವಾಸವಾಗಿದ್ದ. ಬಡತನದ ಜೊತೆಗೆ ತಾಯಿಯ ಕಾಯಿಲೆ ಇದ್ದದ್ದರಿಂದ ಸಿರಿವಂತ ಚಿಕ್ಕಪ್ಪನಿಗೆ ಸಹಾಯ ಕೇಳಿದ. ಆದರೆ ಆತ ಸಹಾಯ ಮಾಡಲಿಲ್ಲ. ಒಂದು ದಿನ ತಾಯಿಯ ಔಷದ ಹಣಕ್ಕಾಗಿ ಪರದಾಡುತ್ತಾ ದಾರಿಯಲ್ಲಿ ಒಂದು ಮರದ ಕೆಳಗೆ ದಣಿವಾರಿಸಿಕೊಳ್ಳಲು ಮಲಗಿದ. ಮರದಲ್ಲಿದ್ದ ವೃಕ್ಷದೇವತೆಯು ಆತನ ಮೇಲೆ ಕನಿಕರಗೊಂಡು, ಚಿನ್ನದ ಚಪ್ಪಲಿಗಳನ್ನು ನೀಡಿ, "ಅದನ್ನು ಧರಿಸಿ ಒಂದು ಬಾರಿ ಜಿಗಿದರೆ ಒಂದು ಚಿನ್ನದ ನಾಣ್ಯ ಬರುತ್ತದೆ. ಜೊತೆಗೆ ಒಂದು ಇಂಚಿನಷ್ಟು ಎತ್ತರ ಕುಗ್ಗುತ್ತದೆ" ಎಂದು ಎಚ್ಚರಿಸಿ ಮಾಯವಾದಳು.

ಅದರಂತೆ ರೋಹಿತ ಚಿನ್ನದ ಚಪ್ಪಲಿಯಿಂದ ಚಿನ್ನ ಪಡೆದು ಅದನ್ನು ಮಾರಿ ತಾಯಿಗೆ ಔಷಧಿ ತೆಗೆದುಕೊಂಡು ಹೋದನು. ಇದರಿಂದ ದಿನದಿಂದ ದಿನಕ್ಕೆ **ರೋಹಿತನ** ಸ್ಥಿತಿ ಸುಧಾರಿಸುತ್ತಾ, ಆತನು ಬಡವರಿಗೆ ಸಹಾಯ ಮಾಡುತ್ತಿದ್ದನು. ಈ ವಿಚಾರ **ಸಿರಿವಂತ ಲೋಭಿ** ಚಿಕ್ಕಪ್ಪನಿಗೆ ಗೊತ್ತಾಗಿ ಆತ ಕುತಂತ್ರದಿಂದ ಸಾಮಾನ್ಯ ಚಪ್ಪಲಿಯನ್ನು ಚಿನ್ನದ ಚಪ್ಪಲಿಯ ಸ್ಥಾನದಲ್ಲಿರಿಸಿ, ಆ ಚಪ್ಪಲಿಯನ್ನು ಅಪಹರಿಸಿದನು. ಕದ್ದ ಚಪ್ಪಲಿಯಿಂದ ಅತಿಯಾದ ಧನವನ್ನು ಸಂಗ್ರಹಿಸುವ ಆಸೆಯಿಂದ ಚಿಕ್ಕಪ್ಪ ಮತ್ತೆ ಮತ್ತೆ ಎಗರಿ ನಾಣ್ಯದ ರಾಶಿಯನ್ನು ಮಾಡುವಲ್ಲಿ ಆತ ತನ್ನ ಎತ್ತರ ಒಂದು ಇಂಚಷ್ಟು ಆಗಿರುವುದನ್ನು ಗಮನಿಸಲೇ ಇಲ್ಲ. ಯಾವಾಗ ಆತನ ಗಮನಕ್ಕೆ ಬಂತೋ ಅಷ್ಟರಲ್ಲಿ ಜೋರಾಗಿ ಗಾಳಿ ಬಂದು ಚಪ್ಪಲಿಯೊಂದಿಗೆ ಆತನು ಮಾಯವಾದ.

ಅತಿಯಾಸೆಯಿಂದ ಚಿನ್ನ, ಧನ ಮತ್ತಿತರ ವಸ್ತುಗಳು ದೊರೆತರೂ, ಅದರಿಂದ ಸುಖ, ಶಾಂತಿ, ನೆಮ್ಮದಿ ದೊರೆಯುವುದಿಲ್ಲ. ಬದಲಿಗೆ ತಮ್ಮತನವನ್ನೇ ಕಳೆದುಕೊಳ್ಳುವ ಸ್ಥಿತಿಗೆ ತಲುಪಬಹುದು ಎಂಬುದು ಈ ಎರಡು ಕಥೆಗಳಾದ **ಇನ್ನೊಬ್ಬರ ಮೇಲೆ ತಪ್ಪು ಮತ್ತು ಚಿನ್ನದ ಚಪ್ಪಲಿ ಕಥೆಯಲ್ಲಿ** ವಿಶೇಷವಾಗಿ ಮೂಡಿ ಬಂದಿರುವುದನ್ನು ನೋಡಬಹುದು. ಪ್ರತಿನಿತ್ಯ ಅವಶ್ಯವಾದದ್ದನ್ನು, ಅತ್ಯಗತ್ಯವಾದದ್ದನ್ನು ಪಡೆದುಕೊಳ್ಳಬೇಕು. ಆದರೆ ಅತಿಯಾಸೆಯ ಹಿಂದೆ ಬಿದ್ದು ಆಸೆಗಳ ಬೆನ್ನ ಹತ್ತಿ, ಅತಿಸಿರಿಯನ್ನರಸಿಕೊಂಡು, ಅದರ ಹಿಂದೆ ಹೋಗುವುದು ಮೊದಲಾದುದು ವ್ಯಕ್ತಿಯನ್ನಲ್ಲದೆ ಜನ್ಮ ಭೂಮಿಯನ್ನು ಹಾಳು ಮಾಡುವುದು. 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು'. ಅಗತ್ಯಕ್ಕಿಂತ ಹೆಚ್ಚು ಬಯಸುವುದು, ಕೂಡಿಡುವುದು ತೊಂದರೆಯನ್ನು ಜೊತೆಯಲ್ಲಿಟ್ಟಂತೆ ಎಂಬುದು ಈ ಕಥೆಗಳಿಂದ ಅರಿವಿಗೆ ಬರುತ್ತದೆ.

ಅದುದರಿಂದ ಸಣ್ಣವಯಸ್ಸಿನಿಂದಲೇ ಮಕ್ಕಳಿಗೆ **ಅಗತ್ಯ – ಅತಿಯಾಸೆಗಳ** ನಡುವೆ ಇರುವ ವ್ಯತ್ಯಾಸವನ್ನು ತಿಳಿಸಿಕೊಟ್ಟು, ಸಾತ್ವಿಕ ಹಾಗೂ ಮಿತಿಯಾದ ಆಸೆಯಿಂದ ಜೀವನದಲ್ಲಿ ಸುಖ, ಶಾಂತಿ ಹಾಗೂ ಅತಿಯಾದ ಆಸೆಯಿಂದ ವಿಪತ್ತು, ವಿನಾಶ ಎನ್ನುವುದನ್ನು ಮನದಟ್ಟು ಮಾಡಿಕೊಡಬೇಕು. ಇಲ್ಲವಾದರೆ ಅತಿಯಾಸೆಗೆ ಒಳಗಾಗಿ, ಅತಿ ಹೆಚ್ಚು ಕೂಡಿಡುವ ಬಯಕೆಯಿಂದ ತಮ್ಮ ವ್ಯಕ್ತಿತ್ವದ ಗುರುತನ್ನೇ ಕಳೆದುಕೊಳ್ಳುತ್ತಾರೆ ಎಂಬುದು ಮಕ್ಕಳಿಗೆ ಮನದಟ್ಟು ಮಾಡಬೇಕು. ತನಗೆ ತನ್ನ ಕುಟುಂಬಕ್ಕೆ ಎಂಬುದನ್ನು ಬಿಟ್ಟು ನಮಗೆ ನಮ್ಮ ದೇಶಕ್ಕೆ ಎಂಬ ನೀತಿಯಿದ್ದಾಗ ಮಾತ್ರ ಜನ್ಮ ಸಾರ್ಥಕ. ತನ್ನಲ್ಲಿರುವುದರಲ್ಲಿ ತನಗೆಷ್ಟು ಬೇಕು ಅಷ್ಟನ್ನು ಇಟ್ಟುಕೊಂಡು, ಅವಶ್ಯಕತೆ ಇರುವವರನ್ನು

ಗುರುತಿಸಿ ಉಳಿದುದನ್ನು ನೀಡಿದಾಗ, ಅವರಿಗೆ ಆಪತ್ಕಾಲದಲ್ಲಿ ಸಹಕರಿಸಿ ಬಾಂಧವನಾಗುವುದಲ್ಲದೆ, ಮಾಧರಿ ವ್ಯಕ್ತಿತ್ವವನ್ನು ಪಡೆಯಬಹುದು. ಎಲ್ಲವೂ ತನಗೆ ಎನ್ನುವುದನ್ನು ಬಿಟ್ಟು, ಎಲ್ಲರು ತಮ್ಮವರೇ ಎಂದು, ಎಲ್ಲರೊಡನೆ ಹಂಚಿಕೊಳ್ಳುವ ಸ್ವಭಾವವನ್ನು ಮಕ್ಕಳು ಕಲಿಯಬೇಕು ಎಂಬುದೇ ಒಟ್ಟಾರೆ ಕಥೆಯಲ್ಲಿ ಪ್ರಧಾನ ಆಶಯವಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

****

## ಕೈಕೆಲಸ



ಭಗವಂತನಿಂದ ಜನ್ಮ ಪಡೆದ ಮನುಷ್ಯನು ಇತರ ಜೀವಿಗಳಿಂದ ಆಕಾರ, ಗಾತ್ರ, ವ್ಯಕ್ತಿತ್ವದಲ್ಲಿ ಭಿನ್ನತೆ ಹೊಂದಿರುವುದಲ್ಲದೆ, ಚಿಂತನೆಯಲ್ಲಿಯೂ ಭಿನ್ನವಾಗಿದ್ದಾನೆ. ಅಷ್ಟೇ ಅಲ್ಲದೆ, ಕಾರ್ಯ ಕೌಶಲ್ಯಗಳಲ್ಲಿ ತನ್ನ ಮಾನವ ಕುಲದಲ್ಲೇ ವೈವಿಧ್ಯತೆಯನ್ನು ಹೊಂದಿರುವುದನ್ನು ಕಾಣಬಹುದು. ಕೌಶಲ್ಯ ಅಥವಾ ಕುಶಲತೆ ಎಂಬುದು ಒಬ್ಬರಲ್ಲಿ ಇದ್ದಂತೆ ಮತ್ತೊಬ್ಬರಲ್ಲಿ ಇರಲು ಸಾಧ್ಯವಿಲ್ಲ. ಬೇರೆ ಬೇರೆ ವ್ಯಕ್ತಿಗಳಲ್ಲಿ ವಿವಿಧ ನೈಪುಣ್ಯತೆ, ಕೌಶಲ್ಯವಿರುತ್ತದೆ. ಇದು ಮನುಷ್ಯನ ಅಂತಃಕರಣದಲ್ಲಿ ಹುದುಗಿಕೊಂಡಿರುತ್ತದೆ. ಆ ಕೌಶಲ್ಯವು ಸಂಗೀತ, ಸಾಹಿತ್ಯ, ಜಾನಪದ ಕಸೂತಿ, ಗ್ರಾಮೀಣ ಕಲೆ ಯಾವುದೇ ಆಗಿರಲಿ ಅದನ್ನು ಪ್ರೋತ್ಸಾಹಿಸಿ ಹೊರತರುವುದು ನಮ್ಮ ಹೊಣೆಯಾಗಿರುವುದು. ಮಕ್ಕಳಲ್ಲಿ ಎಳೆಯ ವಯಸ್ಸಿನಿಂದ ಅವರ ಅಭಿರುಚಿಗೆ ತಕ್ಕಂತೆ ವಿವಿಧ ಕೌಶಲ್ಯಗಳು ಬೆಳವಣಿಗೆಗೊಂಡರೆ, ಅದು ಸಮಾಜಕ್ಕೆ, ಕುಟುಂಬಕ್ಕೆ ಒಳ್ಳೆಯದಾಗುವುದಲ್ಲದೆ, ದೇಶಕ್ಕೂ ಒಳ್ಳೆಯ ಹೆಸರನ್ನು ತರುವ ಕಾರ್ಯವಾಗಬಹುದು.

ಅಂತಹ ಕೌಶಲ್ಯಗಳಲ್ಲಿ 'ಕೈಕೆಲಸವೂ' ಒಂದು. ಒಂದು ವಿಧದಲ್ಲಿ ನೋಡಿದರೆ ಕೈಕೆಲಸದಲ್ಲಿ ಶುದ್ಧತೆ, ಪವಿತ್ರತೆ ಇರುತ್ತದೆ. ಏಕೆಂದರೆ ಈ ಕಸುಬನ್ನು ಮನುಷ್ಯ ಕಲಿತದ್ದು

ಪ್ರಕೃತಿಯಿಂದ. ಕಲೆಗೆ ಪ್ರಕೃತಿಯೇ ಸ್ಫೂರ್ತಿ. ಕಸೂತಿ, ಹೊಲಿಗೆ ಮೊದಲಾದ ಕೈಕೆಲಸಕ್ಕೆ ಉಪಯೋಗಿಸುವ ವಸ್ತುಗಳಿಂದ ಪ್ರಕೃತಿಗೆ ಹಿಂಸೆ, ತೊಂದರೆ, ಮಾಲಿನ್ಯವಿಲ್ಲ. ಕೈಕೆಲಸ ಬಲ್ಲವರಿಗೆ ಕಷ್ಟಗಳನ್ನು ಎದುರಿಸುವ ವಿಶ್ವಾಸ, ನೈಪುಣ್ಯತೆ ಇರುತ್ತದೆ. ಅಂತಹ ಒಂದು ಕೈಕೆಲಸದ ಬಗ್ಗೆ 'ನೇಯ್ಗೆಯ ಚಿತ್ರ' ಎಂಬಲ್ಲಿ ಉತ್ತಮವಾಗಿ ತಿಳಿಸಲಾಗಿದ್ದು, ಮೂಲೆ ಗುಂಪಾಗಿರುವ ಕೈಕೆಲಸ, ಗ್ರಾಮೀಣ ಕಲೆಗಳನ್ನು ಪ್ರೋತ್ಸಾಹಿಸುವಲ್ಲಿ ಸಹಕಾರಿಯಾಗಿದ್ದು ಗೌರವ ತಂದು ಕೊಡುವ ಶ್ರೇಷ್ಠ ಪ್ರತಿಭೆಗಳ ಹುಟ್ಟಿಗೆ ಕಾರಣವಾಗಿರುವುದು ಕಥೆಯಲ್ಲಿನ ಮೌಲ್ಯ ಶೋಧನೆಯಲ್ಲಿ ಗೋಚರಿಸುತ್ತದೆ.

**೯. ನೇಯ್ಗೆಯ ಚಿತ್ರ:** ವಿಧವೆ ಸುಹಾಸಿನಿಯು ಸ್ವಾರ್ಥಿ ಸುರೇಂದ್ರ ಎಂಬ ಹಿರಿಯ ಮಗ, ಉದಾರಿ ಮತ್ತು ಕರುಣಾಳು ವಿಜಯೇಂದ್ರ ಎಂಬುವರೊಂದಿಗೆ ವಾಸವಾಗಿದ್ದಳು. ಸುಹಾಸಿನಿ ತುಂಬಾ ಚೆನ್ನಾಗಿ ನೇಯ್ಗೆಯ ಕೆಲಸ ಮಾಡುತ್ತಿದ್ದಳು. ಅವಳು ನೇಯ್ಗೆಯಲ್ಲಿ ಎಷ್ಟು ಪ್ರವೀಣಳೆಂದರೆ, ಅವಳು ನೇಯ್ದ ಚಿತ್ರವನ್ನು ಊರವರೆಲ್ಲ ಕುತೂಹಲದಿಂದ ನೋಡಿ ಮೆಚ್ಚಿ ಪ್ರಶಂಸಿಸುತ್ತಿದ್ದುದಲ್ಲದೆ, ದುಂಬಿಯು ಬಂದು ಮುತ್ತಿ ನಿಜವಲ್ಲವೆಂದು ತಿಳಿದು ಹೋಗುತ್ತಿತ್ತು. ಅಷ್ಟು ಸುಂದರವಾಗಿ ನೈಜತೆಯನ್ನು ಮರೆಸುವಂತಿರುತ್ತಿತ್ತು.

ಒಮ್ಮೆ ಸುಹಾಸಿನಿಯು ತಾನು ನೇಯ್ದ ಚಿತ್ರವನ್ನು ಮಾರಲು ಪೇಟೆಗೆ ಹೋದಾಗ, ಅಲ್ಲಿ ಒಂದು ಸುಂದರವಾದ ಚಿತ್ರಪಟ ನೋಡಿ ಅದರ ಹಿರಿಮೆಯನ್ನು ಮಾರುವವನಿಂದ ತಿಳಿದು ಅದಕ್ಕೆ ಮನಸೋತಳು. ತನ್ನ ಚಿತ್ರ ಮಾರಾಟ ಮಾಡಿ ಬಂದ ಹಣದಿಂದ ಆ ಚಿತ್ರಪಟವನ್ನು ಖರೀದಿಸಿ ಮನೆಗೆ ತಂದು ಮತ್ತೇ ಮತ್ತೇ ಅದನ್ನು ನೋಡಿ ಸಂತೋಷ ಪಡುತ್ತಿದ್ದಳು. ಇದನ್ನು ಗಮನಿಸಿದ ಕಿರಿಯ ಮಗ "ನೀನೇ ಏಕೆ ಆ ಚಿತ್ರವನ್ನು ನೇಯಬಾರದೆಂದನು". ಅದಕ್ಕೆ ಸುಹಾಸಿನಿಯು ಅದನ್ನು ನೇಯಲು ಮೂರು ವರ್ಷವಾದರೂ ಬೇಕಾಗಬಹುದು ಎಂದಳು. ಇದನ್ನು ಕೇಳಿದ ಸ್ವಾರ್ಥಿ ಹಿರಿಯ ಮಗನು ಮೂರು ವರ್ಷ ತಾನು ದುಡಿದು ಸಾಕಲು ಸಾಧ್ಯವಿಲ್ಲ ಎಂದದ್ದನ್ನು ಕೇಳಿದ ಕಿರಿಯವನು ತಾಯಿಯ ದುಃಖಭರಿತ ಮುಖವನ್ನು ಕಂಡು ತಾನು ದುಡಿದು ಸಾಕುತ್ತೇನೆ "ನೀನು ನೇಯಲು ಪ್ರಾರಂಭಿಸು" ಎಂದನು. ಸುಹಾಸಿನಿ ನಿಷ್ಠೆಯಿಂದ ತನ್ನ ಚಿತ್ರ ನೇಯುವ ಕೆಲಸ ಮಾಡಲು ಪ್ರಾರಂಭಿಸಿದಾಗ ಹಿರಿಯ ಮಗನ ಚುಚ್ಚು ನುಡಿಯಿಂದ ನೊಂದು ಬಂದ ಕಣ್ಣೀರು, ನೇಯ್ದ ಚಿತ್ರದ ಮೇಲೆ ಬಿದ್ದು ಬಣ್ಣ ಬದಲಾಗಿ, ಒಂದು ವಿಶೇಷವಾದ ಚಿತ್ರವಾಯಿತು. ಹೀಗೆ ಹಾಗೆ ಮಾಡಿ ಮೂರು ವರ್ಷದಲ್ಲಿ ಚಿತ್ರವನ್ನು ನೇಯ್ದು ಮುಗಿಸಿದಳು. ಆ ಚಿತ್ರವನ್ನು ನೋಡಿದ ಊರಿನ ಜನರು ಪ್ರಶಂಸಿಸುತ್ತಿದ್ದಾಗ, ಜೋರಾಗಿ ಸುಂಟರ ಗಾಳಿ ಬಂದು ಅದನ್ನು ಹಾರಿಸಿಕೊಂಡು ಹೋಯಿತು. ಇದರಿಂದ

ದುಃಖಗೊಂಡ ಸುಹಾಸಿನಿಯನ್ನು ಕಂಡು ಕಿರಿಯ ಮಗ ಅದನ್ನು ತರುವುದಾಗಿ ಹೇಳಿ ಹೋಗುವನು. ಒಬ್ಬ ಮುದುಕಿಯ ಸಹಾಯದಿಂದ ದೇವ ಲೋಕದಲ್ಲಿರುವುದಾಗಿ ತಿಳಿದು, ಅಲ್ಲಿಂದ ತರುವ ಉಪಾಯವನ್ನು ಆ ಮುದುಕಿಯಿಂದಲೇ ತಿಳಿದನು. ಅದರಂತೆ ಸ್ನಾನಕ್ಕಾಗಿ ಬಂದ ದೇವೇಂದ್ರನ ಏಳನೇ ಮಗಳನ್ನು ಹಿಡಿದು ಆ ನೇಯ್ಗೆ ನೀಡಬೇಕಾಗಿ ಹೇಳುವನು. ಇದನ್ನು ಕೇಳಿದ ದೇವೇಂದ್ರನ ಮಗಳು "ಅದರಂತೆ ನಮ್ಮ ಏಳು ಜನರಲ್ಲಿ ಯಾರು ಕಸೂತಿ ಮಾಡಿ ಮುಗಿಸುವರೋ ಅವರಿಗೆ ಆ ನೇಯ್ಗೆಯ ಚಿತ್ರ ಬಹುಮಾನವಾಗಿ ನೀಡಲಾಗುವುದೆಂದು ಹೇಳಿ, ಎಷ್ಟೇ ಪ್ರಯತ್ನ ಪಟ್ಟರು ಅದರಂತೆ ಕಸೂತಿ ಹಾಕಲಾಗುತ್ತಿಲ್ಲ" ಎಂದಳು. ಅದಕ್ಕೆ ವಿಜಯೇಂದ್ರನು "ಅದು ತನ್ನ ತಾಯಿಗೆ ದುಃಖವಾಗಿ ಅತ್ತಾಗ ಬಿದ್ದ ಕಣ್ಣೀರಿನಿಂದಾದ ಬಣ್ಣದ ಬದಲಾವಣೆ" ಎಂದನು. ಅದರಂತೆ ದೇವೇಂದ್ರನ ಏಳನೇ ಮಗಳು ಕಸೂತಿಯನ್ನು ಮಾಡಿ ಮುಗಿಸಿ ಆ ನೇಯ್ಗೆಯ ಚಿತ್ರವನ್ನು ಬಹುಮಾನವಾಗಿ ಪಡೆದು, ತಾನು ಭಾಷೆಯಿಟ್ಟಂತೆ ವಿಜಯೇಂದ್ರನಿಗೆ ಹಿಂತಿರುಗಿಸಿದಳು.

ದೇವೇಂದ್ರನ ಮಗಳಿಂದ ಪಡೆದ ಚಿತ್ರವನ್ನು ತಂದು ವಿಜಯೇಂದ್ರ ತನ್ನ ತಾಯಿಗೆ ನೀಡಿದಾಗ, ಸುಹಾಸಿನಿಗೆ ಆದ ಸಂತೋಷಕ್ಕೆ ಪಾರವೇ ಇರಲಿಲ್ಲ. ಹೀಗೆ ತಮ್ಮ ಕುಶಲತೆ ಹಾಗೂ ಅದರಿಂದ ಪಡೆಯುವ ಸಂತೋಷ ಮತ್ತಾವುದರಿಂದಲೂ ದೊರುಯುವುದಿಲ್ಲ ಎಂಬುದು ಒಂದೇ ಕತೆಯಲ್ಲಿನ ಎರಡು ಉಪಕತೆಯ ಮೂಲಕ ತಿಳಿಸಲಾಗಿದೆ. "ಕಾಯಕವೇ ಕೈಲಾಸ" ಎಂಬ ಬಸವಣ್ಣನವರ ನುಡಿಯಂತೆ ತನ್ನ ಕಸೂತಿ ಕೆಲಸದಲ್ಲಿ ಭಗವಂತನ ಇರುವಿಕೆಯನ್ನು, ಅದರಿಂದ ತನಗೆ ಸಿಗುವ ನೆಮ್ಮದಿ ಶಾಂತಿಯನ್ನು ಸುಹಾಸಿನಿಯ ಪಾತ್ರದೊಂದಿಗೆ ಚಿತ್ರಿಸುವ ಮೂಲಕ, ಕೆಲಸ ಅದರಲ್ಲೂ ಕೈಕೆಲಸದ ಮಹತ್ವದ ಅರಿವನ್ನು ಮಾಡಿಸಲಾಗಿದೆ.

ಜೊತೆಗೆ **ಉದಾರತೆ ಕರುಣೆ**ಯಿಂದ ಒಬ್ಬರ ಮನಸ್ಸನ್ನು ವಿಶ್ವಾಸವನ್ನು, ನಂಬಿಕೆಯನ್ನು ಗಲ್ಲಬಹುದೇ ಹೊರತು ಸ್ವಾರ್ಥತನದಿಂದಲ್ಲ ಎಂಬುದನ್ನು ಸುಹಾಸಿನಿಯ ಹಿರಿಯ ಕಿರಿಯ ಮಗನ ಪರಿಚಯದೊಂದಿಗೆ ಮಾಡಿಸಿರುವುದು ಅದ್ಭುತವಾಗಿ ಮೂಡಿಬಂದಿದ್ದು, ಮಕ್ಕಳಿಗೆ ಇತರ ಮೌಲ್ಯಗಳಾದ ಉದಾರತೆ, ಕರುಣೆಯ ಬಗ್ಗೆ ತಿಳಿಸುವಲ್ಲಿ ಯಶಸ್ವಿಯಾಗಿ ಪರಿಣಮಿಸಬಹುದು. ಈ ರೀತಿಯ ಕಥೆಗಳಿಂದ ಮಕ್ಕಳಿಗೆ ಕೈಕೆಲಸದ ಬಗ್ಗೆ ತಿಳಿಯುದಲ್ಲದೆ, ತಮ್ಮಲ್ಲಿರುವ ಕುಶಲತೆಯನ್ನು ಬೆಳೆಸಲು ಹಾಗೂ ಒಳ್ಳೆಯ ಗುಣಗಳನ್ನು ರೂಡಿಸಿಕೊಳ್ಳಲು ಸಹಕಾರಿಯಾದುದನ್ನು ಗಮನಿಸಬಹುದು.

****

## ಮೈತ್ರಿ/ಸ್ನೇಹ



ಮಾನವನಿಗೆ ಅರಿವಿಲ್ಲದೆಯೇ ನಮ್ಮ ಸುತ್ತಲಿನ ಗಾಳಿ, ನೀರು, ಮರ ಮುಂತಾದವುಗಳ ಜೊತೆ ಸ್ನೇಹವಾಗಿರುತ್ತದೆ. 'ಸ್ನೇಹ ಎಂಬುದು ಇಬ್ಬರು ಅಥವಾ ಹೆಚ್ಚು ಜನರ ನಡುವೆ ಪರಸ್ಪರ ಪ್ರೀತಿ ಸಂಬಂಧ. ಅಕ್ಕರೆಯ ಅನುಬಂಧ'. ಸ್ನೇಹವನ್ನು ಸಮಾಜಶಾಸ್ತ್ರ, ಸಾಮಾಜಿಕ ಮನೋವಿಜ್ಞಾನ, ಮನಃಶಾಸ್ತ್ರ, ತತ್ವಶಾಸ್ತ್ರ ಮೊದಲಾದ ಕ್ಷೇತ್ರಗಳಲ್ಲಿ ಅಧ್ಯಯನ ಮಾಡಲಾಗಿದ್ದು, ಅದರ ಮಹತ್ವವನ್ನು ತಿಳಿಸಲಾಗಿದೆ.

**ವಿಶ್ವ ಹ್ಯಾಪಿನೆಸ್ ಡೇಟಾ ಬೇಸ್ ಅಧ್ಯಯನದ** ಪ್ರಕಾರ "ಸ್ನೇಹ ಜನರಿಗೆ ಸಂತೋಷ ಕೊಡುತ್ತದೆ". ಪ್ರೀತಿ ಸಹಾನುಭೂತಿ, ಪ್ರಾಮಾಣಿಕತೆ, ಅನುಭೂತಿ, ಪರೋಪಕಾರ ಬುದ್ದಿ ಮೊದಲಾದ ಲಕ್ಷಣಗಳೊಂದಿಗೆ, ಸ್ನೇಹವು ಸ್ಥಳದಿಂದ ಸ್ಥಳಕ್ಕೆ ಹಲವು ರೂಪಗಳಲ್ಲಿ ಬದಲಾಗಬಹುದು. ಅಲ್ಲದೆ ಒಬ್ಬರ ಭಾವನೆಗಳನ್ನು ವ್ಯಕ್ತಪಡಿಸಲು ಮತ್ತು ಸ್ನೇಹಿತರ ತೀರ್ಪು ಭಯವಿಲ್ಲದೆ ತಪ್ಪುಗಳನ್ನು ತಿದ್ದುವ ಸಾಮರ್ಥ್ಯವಿದೆ. ಅಂತಹ ಸ್ನೇಹವನ್ನು ಮಹಾಭಾರತ, ರಾಮಾಯಣದಲ್ಲಿ ಕಾಣಲಾಗಿದೆ.

ಅಂದರೆ ಕೃಷ್ಣ ಕುಚೇಲರ ಸ್ನೇಹ, ದುರ್ಯೋಧನ ಕರ್ಣನ ಸ್ನೇಹ ಉತ್ತಮ ನಿದರ್ಶನವಾಗಿರುವುದಷ್ಟೇ ಅಲ್ಲದೆ, ಸ್ನೇಹಕ್ಕಿಂತ ಉನ್ನತವಾದುದು ಮತ್ತೊಂದಿಲ್ಲ ಎಂದು ತಿಳಿಸಿಕೊಟ್ಟಿದ್ದಾರೆ. ಅಂತಹ ಸ್ನೇಹದ ಬಗ್ಗೆ ತಿಳಿಸುವ ಕಥೆ 'ಅತ್ತೆಯ ಕರಾರು' ಎಂಬಲ್ಲಿ ಸ್ನೇಹದ ಮಹತ್ವವನ್ನು ಉತ್ತಮವಾಗಿ ಉಲ್ಲೇಖಿಸಲಾಗಿದ್ದು, ಕಷ್ಟ-ಸುಖದಲ್ಲಿ ಎಂದೆಂದಿಗೂ ಜೋತೆಯಲ್ಲಿದ್ದು ಬರುವ ಎಂತಹ ಸ್ಥಿತಿಯನ್ನೂ ಎದುರಿಸಿ ನಿಲ್ಲಬಹುದೆಂಬುದನ್ನು ತಿಳಿಸಿರುವುದನ್ನು ಕಾಣಬಹುದು.

**೧೦. ಅತ್ತೆಯ ಕರಾರು:** ಬಾಲ್ಯದಿಂದಲೇ ಗೆಳತಿಯರಾದ ಪದ್ಮಮುಖಿ ಮತ್ತು ಕಮಲಮುಖಿ ಒಬ್ಬರನ್ನೊಬ್ಬರು ಬಿಟ್ಟಿರುತ್ತಿರಲ್ಲಿಲ್ಲ. ಅದಕ್ಕೆ ಎಲ್ಲರೂ "ಮದುವೆಯಾದ ಮೇಲೆ ನಿಮ್ಮಿಬ್ಬರ ಸ್ನೇಹ ಕಡಿದು ಹೋಗುತ್ತದೆ" ಎಂದರೂ ಅವರಿಬ್ಬರು ಬೇರೆ ಯಾರ ಸ್ನೇಹವನ್ನು ಮಾಡಿಕೊಳ್ಳದೆ, ಒಂದೇ ಅತ್ಮ, ಎರಡು ದೇಹದಂತಿದ್ದರು.

ಇವರಿಬ್ಬರು ಮುದುವೆ ಮುಂಚೆ ಹಾಕಿದ ಕರಾರಿನಂತೆ ಇಬ್ಬರಿಗೂ ಒಂದೇ ಮನೆಯ ಅವಳಿ ಮಕ್ಕಳಿಗೆ ಕೊಟ್ಟು ಮದುವೆ ಮಾಡಲಾಯಿತು. ಮದುವೆಯಾದ ಸ್ವಲ್ಪ ದಿನಗಳ ನಂತರ ಅವರ ಗಂಡಂದೀರಿಬ್ಬರೂ ಪರದೇಶಕ್ಕೆ ಕೆಲಸಕ್ಕೆಂದು ಹೋದಾಗ ಇವರಿಗೆ ಅತ್ತೇ ಬರೀ ಜೋರಲ್ಲ, ತುಂಬಾ ಜೋರೆಂದು ಗೊತ್ತಾಯಿತು. ಅವಳು ಇವರಿಬ್ಬರನ್ನು ತವರುಮನೆಗೆ ಹೋಗಲು ಬಿಡುತ್ತಿರಲಿಲ್ಲ. ಹೀಗೆ ವರ್ಷಗಳು ಕಳೆದಾಗ ಪದ್ಮಮುಖಿ ಏನೇ ಆದರೂ ತವರು ಮನೆಗೆ ಹೋಗಲೇಬೇಕೆಂದು ಹಠ ಹಿಡಿದಳು. ಅದಕ್ಕೆ ಅತ್ತೆಯು " ತವರು ಮನೆಯಿಂದ ಬರಬೇಕಾದರೆ, ಪದ್ಮಮುಖಿ ನೀನು ಕಾಗದದಲ್ಲಿ ಬೆಂಕಿಯನ್ನು ಹಾಗೂ ಕಮಕಮುಖಿ ಕೈಯಲ್ಲಿ ಗಾಳಿಯನ್ನು ಹಿಡಿದುಕೊಂಡು ಬಾ. ಇಲ್ಲವಾದರೆ ಮನೆಗೆ ಬರಲೇ ಬೇಡಿ" ಎಂದಳು. ಈ ಕರಾರಿನ ಚಿಂತೆಯೊಂದಿಗೆ ತವರು ಮನೆಗೆ ಇಬ್ಬರು ಹೋದರು.

ತವರುಮನೆಯಲ್ಲಿ ಇಬ್ಬರೂ ಆರಾಮವಾಗಿ ಕಾಲ ಕಳೆದ ನಂತರ ಹಿಂತಿರುಗುವ ದಿನ ಬಂದಾಗ ಇಬ್ಬರು ಅತ್ತೆಯ ಕರಾರನ್ನು ಹೇಗೆ ಪೂರ್ಣಗೊಳಿಸಬೇಕೆಂದು ಚಿಂತೆಯಲ್ಲಿದ್ದರು. ಇದನ್ನು ಗಮನಿಸಿದ ಊರಿನ ಹಿರಿಯ ಜಾಣ ಅಜ್ಜಿ ಅ ಸಮಸ್ಯೆಗೆ ಪರಿಹಾರವನ್ನು "ಆಕಾಶ ಕಂದೀಲು ಮತ್ತು ಕೈ ಬೀಸಣಿಕೆ" ಎಂದು ಹೇಳಿ ಕಳುಹಿಸಿದಳು.

ಹೀಗೆ ಬಾಲ್ಯದಿಂದ ಸ್ನೇಹಿತರಾಗಿದ್ದ ಕಮಲಮುಖಿ ಮತ್ತು ಪದ್ಮಮುಖಿ ಇಬ್ಬರು, ಸುಖದಲ್ಲೂ ದುಃಖದಲ್ಲೂ ತಮ್ಮ ಸ್ನೇಹವನ್ನು ಕಾಪಾಡಿಕೊಂಡು ನೈಜ ಸ್ನೇಹಕ್ಕೆ ಮಾದರಿಯಾಗಿರುವುದನ್ನು ಕಥೆಯಲ್ಲಿ ಕಾಣಬಹುದು. ಅಲ್ಲದೆ ಹಿರಿಯರ ಪ್ರತಿಯೊಂದು ಮಾತಿನಲ್ಲೂ ಒಗಟಿನ, ಅನುಭವದ ರೂಪವಿರುತ್ತದೆ. ಅದನ್ನು ಜಾಣತನದಿಂದ ಬಗೆಹರಿಸಬೇಕೆಂಬುದು ತಿಳಿಸಲಾಗಿದ್ದು ಮಕ್ಕಳಿಗೆ ಬಹುರೂಪಿ ಮೌಲ್ಯಗಳನ್ನು ಗುಣಗಳಾಗಿ ಬೆಳೆಸಿಕೊಳ್ಳುವ ಹಿತನುಡಿಯನ್ನು ನೀಡಿರುವುದು ಶೋಧನೆಯಲ್ಲಿ ಗುರುತಿಸಲಾಗಿದೆ.

ಮಕ್ಕಳು ತುಂಬಾ ಸ್ನೇಹಮಯರಾಗಿದ್ದು, ಎಳೆಯ ವಯಸ್ಸಿನಿಂದಲೇ ಸ್ನೇಹವನ್ನು ಬಯಸುತ್ತಾರೆ. ಮಕ್ಕಳ ಮನಸ್ಸು ಮುಗ್ಧತೆಯಿಂದ ತುಂಬಿದ್ದು, ಆವೇಶ, ಉದ್ವೇಗಪೂರಿತವಾಗಿರುತ್ತದೆ. ಆದುದರಿಂದ ಸರಿಯಾದ, ಒಳ್ಳೆಯ ಗೆಳೆಯರನ್ನು ಆರಿಸಿಕೊಳ್ಳುವ ವಿಷಯದಲ್ಲಿ ಅವರಿಗೆ ಮಾರ್ಗದರ್ಶನ ನೀಡುವುದು ಅಗತ್ಯ. ಕಾರಣ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಂಡು, ಕೇಡನ್ನು ಬಯಸುವ ಸ್ವಾರ್ಥಿ ಕಳ್ಳರಿಂದ ಮಕ್ಕಳಿಗೆ ತೊಂದರೆಯಾಗುವುದಲ್ಲದೆ, ಶತೃತ್ವ ದ್ವೇಷ ಬೆಳೆಯಲು ಪ್ರೇರೇಪಿಸುತ್ತದೆ. ಇದು ದೇಶದ ಭಾವಿ ಪ್ರಜೆಗೆ ಮಾರಕವಾದುದಾಗಿದ್ದು, ದೇಶದ ಪ್ರಗತಿ, ಅಭಿವೃದ್ಧಿಗೆ ತೊಂದರೆಯನ್ನುಂಟು ಮಾಡುತ್ತದೆ. ಹೀಗಾಗಿ ಮಕ್ಕಳಿಗೆ ಒಳ್ಳೆಯ ಸ್ನೇಹದ ಬಗ್ಗೆ ತಿಳಿಸುವುದು ಅಗತ್ಯ. ಅಂತಹ ಕಾರ್ಯ ಮಾಡುವಲ್ಲಿ ಅತ್ತೆಯ ಕರಾರು ಉತ್ತಮ ಕಥೆಯಾಗಿದ್ದು, ಒಳ್ಳೆಯ ಸ್ನೇಹಕ್ಕೆ ಉತ್ತಮವಾದ ಉದಾಹರಣೆಯಾಗಿದೆ.

****

# ಪರಿವರ್ತಿತ ಮೌಲ್ಯಗಳು




'ಅಣು-ಪರಮಾಣುವಿನಂತೆ ಮೌಲ್ಯಗಳನ್ನು ಸೃಷ್ಟಿಸುವುದಾಗಲಿ, ನಾಶ ಪಡಿಸುವುದಾಗಲೀ ಸಾಧ್ಯವಿಲ್ಲ. ಶಾಶ್ವತ, ಅನಂತವಾಗಿ ಮೌಲ್ಯಗಳನ್ನು ಮೌಲ್ಯಗಳಾಗಿ ಇರುವಂತೆ ಸಾಧಿಸುವುದೇ ಅತ್ಯುನ್ನತ ಮೌಲ್ಯ'. ಈ ನಿಟ್ಟಿನಲ್ಲಿ ಆಚರಣೆ, ಸಂಪ್ರದಾಯ, ದೈನಂದಿನ ಕಾರ್ಯಚರಣೆಯಂತಿದ್ದ ನಂಬಿಕೆ, ಕರುಣೆ, ಪರೋಪಕಾರ, ಚಾತುರ್ಯ, ದಾನ, ಚಿಂತನಶೀಲತೆ ಮೊದಲಾದವು ತಮ್ಮ ಸ್ವರೂಪ, ಮಹತ್ವ, ಪ್ರಭಾವದಿಂದಾಗಿ ಪರಿವರ್ತಿತಗೊಂಡು ಮೌಲ್ಯಗಳಾಗಿ ನೀತಿಯುಕ್ತವಾಗಿರುವುದು ಶೋಧನೆಯಿಂದ ತಿಳಿದು

ಬಂದಿದೆ. ಈ ಮೌಲ್ಯಗಳು ವಾಸ್ತವತೆಯ ಅವಿಭಾಜ್ಯ ಅಂಗವಾಗಿದ್ದು, ನಮ್ಮ ಭಾವನೆ ಇಂದ್ರೀಯ ವ್ಯಾಪಾರಗಳಿಗೆ ಮಾತ್ರ ಆನ್ವಯಿಸುವುದಿಲ್ಲ. ಬದಲಿಗೆ ಈ ಮೌಲ್ಯಗಳು ನಮ್ಮ ಬಾಳಿನಲ್ಲಿ ಬಹು ಮುಖ್ಯ ಸ್ಥಾನವನ್ನು ಪಡೆದಿರುವುದನ್ನು ಕಥೆಗಳಲ್ಲಿ ವೀಕ್ಷಿಸಬಹುದು.

## ನಂಬಿಕೆ

'ಮನುಷ್ಯನ ಅಂತರಾಳದಲ್ಲಿರುವ ಅಂತರ್ವಾಣಿಯೇ ನಂಬಿಕೆಯಾಗಿದೆ'. ಇದು ಬುದ್ದಿ, ತರ್ಕ, ವಾದ, ವಿವಾದಗಳ ಮೇಲೆ ಆಧಾರವಾಗಿರುವುದಿಲ್ಲ. ಯಾವುದು ಇದುವರೆಗೂ ಪ್ರಪಂಚದಲ್ಲಿ ಆಗಿಲ್ಲವೋ ಅದು ಆಗುತ್ತದೆ ಎನ್ನುವ ಭರವಸೆ ಇಟ್ಟುಕೊಳ್ಳುವುದು ಹಾಗೂ ಯಾವುದೇ ದಾಖಲೆಗಳಿಲ್ಲದ ಸಕಾರಾತ್ಮಕ ವಿಷಯವನ್ನು ಸ್ವೀಕರಿಸಲು ಸಿದ್ಧವಿರುವುದು ನಂಬಿಕೆಯಿಂದಾಗಿಯೇ ಎಂಬುದನ್ನು ವಿದ್ವಾಂಸರು ಒಪ್ಪಿರುವುದನ್ನು ಕಾಣಬಹುದು. ಮನುಷ್ಯ ತನ್ನ ಬುದ್ದಿ ಶಕ್ತಿಯಿಂದ ಅನೇಕ ಸಮಸ್ಯೆಗಳಿಗೆ ಪರಿಹಾರ ಹುಡುಕಬಲ್ಲನೇ ಹೊರತು ಎಲ್ಲಾ ಸಮಸ್ಯೆಗಳಿಗೂ ಅಲ್ಲ.

ನಂಬಿಕೆಯೆನ್ನುವುದು ಯಾವುದೇ ಸಂಬಂಧದ ಅಡಿಪಾಯ. ಅದು ಗಟ್ಟಿಯಿಲ್ಲದಿದ್ದರೆ, ವೈಮನಸ್ಸು ಉಂಟಾಗಿ ಸಂಬಂಧಗಳು ಉಳಿಯಲಾರದು. ತಂದೆ-ತಾಯಿ, ಮಕ್ಕಳ, ಸಹೋದರ-ಸಹೋದರಿ, ಗುರು-ಶಿಷ್ಯ, ಗಂಡ-ಹೆಂಡತಿ, ಸ್ನೇಹಿತರು ಮೊದಲಾದ ಸಂಬಂಧಗಳು ನೆಲೆ ನಿಂತಿರುವುದು ನಂಬಿಕೆಯ ಮೇಲೆಯೇ. ಮಹಾಭಾರತದಲ್ಲಿ ಅರ್ಜುನ ಕೌರವ ಸಮೂಹವನ್ನು ಎದುರಿಸಿದ್ದು ತನ್ನ ಬಾಹುಬಲದಿಂದಾಗಿ ಮತ್ತು ಕೃಷ್ಣ ತನ್ನ ಜೊತೆಯಲ್ಲಿದ್ದಾನೆ ಎಂಬ ನಂಬಿಕೆಯಿಂದ. ಹಾಗೆಯೇ ಅಭಿಮನ್ಯು, ಚಕ್ರವ್ಯೂಹ ಭೇದಿಸಿದ್ದು ತನ್ನ ಸಾಮರ್ಥ್ಯದ ಮೇಲಿನ ನಂಬಿಕೆಯಿಂದಾಗಿ. ಪ್ರಪಂಚದಲ್ಲಿ ನಮ್ಮ ಸುತ್ತಮುತ್ತಲಿನಲ್ಲಿ ನಂಬಿಕೆಯಿದ್ದಾಗ ಮಾತ್ರ ಸಮಾಜದಲ್ಲಿ ಮುಂದೆ ಹೋಗಲು, ಅಭಿವೃದ್ಧಿ ಹೊಂದಲು ಸಾಧ್ಯ. ಇಲ್ಲವಾದರೆ ಜೀವನ ನಡೆಸುವುದೇ ಕಷ್ಟವಾಗುವುದು.

ನಂಬಿಕೆ ಜೀವನದ ಆಧಾರ. ನಂಬಿಕೆಯ ಮೇಲೆಯೇ ಜೀವನ ನಿಂತಿರುವುದು. ನಂಬಿಕೆ ವಿಶ್ವಾಸ ಮೂಡಿಸುತ್ತದೆ. ನಂಬಿಕೆಯೇ ಇಲ್ಲವೆಂದಾದರೆ ಪ್ರೀತಿ ಎಲ್ಲಿಂದ ಮೂಡಿತು?. ಜೀವನದಲ್ಲಿ ನಂಬಿಕೆ ಇಲ್ಲದಿದ್ದಾಗ ಅನುಮಾನವೆಂಬ ಒಂದು ದೊಡ್ಡ ರೋಗವು ನಮ್ಮನ್ನು ಮುತ್ತಿ ಬಿಡುತ್ತದೆ. ಈ ಹಿನ್ನೆಲೆಯಲ್ಲಿ 'ಚಿನ್ನಬೆಳ್ಳಿ, ಜನರ ಮಾತು, ಕುದುರೆಯ ವ್ಯವಹಾರ, ಸರಿಯಾದ ಲೆಕ್ಕ, ಹೂತಿಟ್ಟ ಹಣ, ಲೋಕದ ರೀತಿ, ಒಗ್ಗಟ್ಟಿನಲ್ಲಿ ಬಲವಿದೆ' ಮೊದಲಾದ ಕಥೆಗಳಲ್ಲಿ ನಂಬಿಕೆಯ ಹೊಸ ಹೊಳಲನ್ನು ಕಾಣಬಹುದು. **ಚಿನ್ನಬೆಳ್ಳಿ** ಮತ್ತು **ಸರಿಯಾದ ಲೆಕ್ಕ** ಕಥೆಗಳ ಮೂಲಕ ನಂಬಿಕೆಯ ಮಹತ್ವವನ್ನು ವಿಶ್ಲೇಷಿಸಲಾಗಿದೆ.

**೧. ಚಿನ್ನಬೆಳ್ಳಿ:** ಒಂದೂರಿನಲ್ಲಿ ರಾಘವ ಮತ್ತು ಧನಂಜಯನೆಂಬ ಇಬ್ಬರು ಸ್ನೇಹಿತರಿದ್ದರು. ಅವರಿಬ್ಬರೂ ಬಹಳ ವರ್ಷದಿಂದ ಸ್ನೇಹಿತರಾದ ಕಾರಣ ಇಬ್ಬರಲ್ಲೂ ಮತ್ತೊಬ್ಬರ ಬಗ್ಗೆ ಅಪಾರ ನಂಬಿಕೆಯಿತ್ತು. ಒಮ್ಮೆ ರಾಘವ ಕೆಲಸದ ಮೇಲೆ ಪರಿವಾರ ಸಮೇತ ಪರ ಊರಿಗೆ ಹೋಗಬೇಕಾಗಿ ಬಂದಾಗ ತನ್ನೆಲ್ಲ ಬೆಳ್ಳಿಯ ಪಾತ್ರೆಗಳನ್ನು ಕಳ್ಳರ ಭಯದಿಂದಾಗಿ ಹಾಗೂ ಧನಂಜಯನ ಮೇಲಿನ ನಂಬಿಕೆಯಿಂದಾಗಿ ಧನಂಜಯನ ಮನೆಯಲ್ಲಿಟ್ಟು ಹೋದನು. ಮೂರು ತಿಂಗಳ ನಂತರ ರಾಘವ ಹಿಂತಿರುಗಿ ಬಂದಾಗ, ಮೂರು ತಿಂಗಳಲ್ಲಿ ಪಾತ್ರೆಗಳು ಮರಿಹಾಕಿವೆ ಎಂದು ಧನಂಜಯ ಪಾತ್ರೆಗಳನ್ನು ಹಿಂತಿರುಗಿಸಿದನು. ರಾಘವನು ತನ್ನಷ್ಟೇ ಪಾತ್ರೆಗಳನ್ನು ತೆಗೆದುಕೊಳ್ಳುವ ಬದಲು ಹೆಚ್ಚಿನ ಪಾತ್ರೆಗಳನ್ನು ಸೇರಿಸಿ ತೆಗೆದುಕೊಂಡದು, ಅವನಲ್ಲಿನ ಕೆಟ್ಟ ಗುಣವನ್ನು ತೋರಿಸುವ ಸಾಧ್ಯತೆಯಿದೆ.

ಮತ್ತೊಮ್ಮೆ ರಾಘವ ಬೇಕೆಂದೇ ಚಿನ್ನದ ಆಭರಣವನ್ನು ಧನಂಜಯನ ಮನೆಯಲ್ಲಿಟ್ಟನು. ಈ ಸಾರಿ ಧನಂಜಯ ಆಭರಣಗಳನ್ನು ಹಿಂತಿರುಗಿಸುವಾಗ ಕಡಿಮೆ ಕೊಟ್ಟಿದ್ದು ಗಮನಿಸಿದ ರಾಘವ ಹೆಚ್ಚು ಸಿಕ್ಕಾಗ ಏನೂ ಹೇಳದವ, ಈಗ ಕಡಿಮೆ ಸಿಕ್ಕಾಗ "ಇದು ಮೋಸ ಎಂದು" ತಗಾದೆ ತೆಗೆದನು. ಅದಕ್ಕೆ ಧನಂಜಯನು "ಬೆಳ್ಳಿ ಮರಿಗಳನ್ನು ಹಾಕಿದಾಗ ಏನು ಹೇಳದೆ ತೆಗೆದುಕೊಂಡು ಹೋದವನು, ಚಿನ್ನ ಸತ್ತಿದೆ ಎಂದರೆ ಏಕೆ ತಕರಾರು ಮಾಡುತ್ತಿದ್ದೀಯ" ಎಂದು ಅವನ ತಪ್ಪಿನ ಅರಿವನ್ನು ಮಾಡಿಸಿ, ನಂಬಿಕೆ ಮೌಲ್ಯವು ಅತ್ಯಮೂಲ್ಯವಾದುದಾಗಿದ್ದು, ನಂಬಿಕೆಗೆ ದ್ರೋಹ ಬಗೆಯಬಾರದು ಎಂಬ ಸಂದೇಶವನ್ನು ಕಥೆಯಲ್ಲಿ ಕಾಣಬಹುದು.

**೨. ಸರಿಯಾದ ಲೆಕ್ಕ:** ಪರಸ್ಪರ ವಿರುದ್ಧ ಸ್ವಭಾವದವರಾದ ಪರೋಪಕಾರಿ ರಾಮ, ಸ್ವಾರ್ಥಿ ಶ್ಯಾಮ ಇಬ್ಬರೂ ಬೇರೆ ಊರಿಗೆ ಹೋಗಬೇಕಾಗಿ ಬಂದಾಗ, ಅವರ ತಾಯಿ

ಬುತ್ತಿ ಕಟ್ಟಿ ಕಳುಹಿಸುವಳು. ನಡೆದು ನಡೆದು ದಣಿವು ಜೊತೆಯಲ್ಲಿ ಹಸಿವಾದಾಗ ಇಬ್ಬರು ಒಂದು ಮರದ ಕೆಳಗೆ ತಾವು ತಂದ ರೊಟ್ಟಿಯನ್ನು ಕೈ, ಕಾಲು, ಮುಖ ತೊಳೆದುಕೊಂಡು ಬಂದು ಕುಳಿತು ತಿನ್ನಬೇಕು ಎನ್ನುವಷ್ಟರಲ್ಲಿ, ಇನ್ನೊಬ್ಬ ಪ್ರವಾಸಿ "ತನಗೂ ಹಸಿವಾಗಿದೆ. ಸ್ವಲ್ಪ ರೊಟ್ಟಿಕೊಡಿ" ಎಂದನು. ಅದಕ್ಕೆ ತಮ್ಮನ ವಿರೋಧವಿದ್ದರೂ, ರಾಮ ತಮ್ಮಲ್ಲಿದ್ದ ರೊಟ್ಟಿಯಿಂದ ಮೂರು ಸಮಪಾಲು ಮಾಡಿ ಆ ಆಗಂತುಕನ ಜೊತೆ ಹಂಚಿಕೊಂಡು ಎಲ್ಲರೂ ತಿಂದರು.

ಆಗಂತುಕನು ತಿಂದಕ್ಕೆ ಪ್ರತಿಯಾಗಿ ೫ ಬೆಳ್ಳಿಯ ನಾಣ್ಯಗಳನ್ನು ರಾಮನ ಕೈಗೆ ಬಲವಂತವಾಗಿ ಇಟ್ಟನು. ರಾಮನು ತನಗೆ ೩ ರೊಟ್ಟಿಯಾದ್ದರಿಂದ ಆ ನಾಣ್ಯಗಳಲ್ಲಿ ಮೂರನ್ನು ತಾನಿಟ್ಟುಕೊಂಡು, ತಮ್ಮನು ೨ ರೊಟ್ಟಿ ಹೊಂದಿದ್ದರಿಂದ ಎರಡನ್ನು ತಮ್ಮನಿಗೆ ನೀಡಿದಾಗ, ಅವನು ತನಗೆ ಕಡಿಮೆ ನಾಣ್ಯ ನೀಡಿರುವುದಾಗಿ, ಸಮವಾಗಿ ನಾಣ್ಯಗಳನ್ನು ಹಂಚಬೇಕೆಂದು ತಕರಾರು ಮಾಡಿದನು. ರಾಮನು ಊರಿಗೆ ಹಿಂತಿರುಗಿದ ನಂತರ ಅರ್ಧ ನಾಣ್ಯ ನೀಡುವುದಾಗಿ ಹೇಳಿದರೂ, ಶ್ಯಾಮನು ಅಣ್ಣನನ್ನು ನಂಬದೆ ವಾದಿಸುತ್ತಿದ್ದನು.

ದೂರದಿಂದ ಗಮನಿಸುತ್ತಿದ್ದ ಜಾಣನೊಬ್ಬ "ಇದರಲ್ಲಿ ಶ್ಯಾಮನಿಗೆ ನ್ಯಾಯ ಸಿಗುವುದಿಲ್ಲ. ನಾನು ನ್ಯಾಯ ಮಾಡಲೇ?" ಎಂದ. ಈತನ ಮಾತನ್ನು ಶ್ಯಾಮ ಕೂಡಲೇ ನಂಬಿ "ನೀವು ಹೇಳುವುದು ಸರಿ. ನಮಗೆ ನ್ಯಾಯ ಒದಗಿಸಿ" ಎಂದು ಹುಮ್ಮಸ್ಸಿನಿಂದ ಹೇಳಿದ. ಆಗಂತುಕ ಮೊದಲು ಇಬ್ಬರಿಂದಲೂ ಹಣ ತೆಗೆದುಕೊಂಡು "ನೋಡಿ, ನೀವು ೫ ರೊಟ್ಟಿಯನ್ನು ೩ ಜನ ಹಂಚಿಕೊಂಡಿದ್ದೀರಿ. ಅಂದರೆ ಪ್ರತಿ ರೊಟ್ಟಿಯಲ್ಲಿ ೩ ತುಂಡಾಯ್ತು. ೫ ರೊಟ್ಟಿಯಲ್ಲಿ ೧೫ ತುಂಡಾಗಿ, ಪ್ರತಿಯೊಬ್ಬರಿಗೂ ೫ ತುಂಡು ರೊಟ್ಟಿ ಬಂದಿದೆ. ಶ್ಯಾಮ ತನ್ನಲ್ಲಿದ್ದ ೨ ರೊಟ್ಟಿಯಿಂದಾದ ೬ ತುಂಡಲ್ಲಿ ಒಂದನ್ನೂ, ರಾಮ ತನ್ನಲ್ಲಿದ್ದ ೩ ರೊಟ್ಟಿಯಿಂದಾದ ೯ ತುಂಡಲ್ಲಿ ೪ನ್ನೂ ಅತಿಥಿಗೆ ಕೊಟ್ಟಿದ್ದೀರ. ಅದುದರಿಂದ ರಾಮನಿಗೆ ೪ ನಾಣ್ಯ, ಶ್ಯಾಮನಿಗೆ ಒಂದು ನಾಣ್ಯವೆಂದು" ಸರಿಯಾದ ಲೆಕ್ಕ ಹಾಕಿ, ಸಮಪಾಲನ್ನು ಮಾಡಿ ಹೋದನು.

ನಂಬಿಕೆಯ ಪರೀಕ್ಷೆಯು ಯಾವ ಸಂದರ್ಭದಲ್ಲಾದರೂ, ಯಾರಿಂದಲಾದರೂ ಆಗಬಹುದು. ದೃಢ ಆತ್ಮವಿಶ್ವಾಸ ಪ್ರಾಮಾಣಿಕತೆಯಿಂದಿದ್ದಾಗ ಮಾತ್ರ ನಂಬಿಕೆಯ ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸಬಹುದು ಎಂಬ ನೀತಿಯು **ಚಿನ್ನಬೆಳ್ಳಿ** ಕಥೆಯಲ್ಲಿ, **ನಂಬಿಕೆ ನಂಬಿಕೆಯಾಗೆ ಉಳಿದಾಗ ಸಂಪತ್ತು. ಅಪನಂಬಿಕೆಯಾದಾಗ ಆಪತ್ತು** ಎಂಬುದು **ಸರಿಯಾದ ಲೆಕ್ಕ** ಕಥೆಯಲ್ಲಿ ಮನೋಜ್ಞವಾಗಿ ಮೂಡಿಬಂದಿರುವುದನ್ನು ಗಮನಿಸಬಹುದು. ಜೀವನದಲ್ಲಿ ನಂಬಿಕೆಯು ಅಗತ್ಯ. ನಂಬಿಕೆಯು ಕೆಲವು ವೇಳೆ ಸಕಾರಾತ್ಮಕ ಫಲಿತಾಂಶವನ್ನೂ, ಕೆಲವು ವೇಳೆ ನಕಾರಾತ್ಮಕ ಪರಿಣಾಮವನ್ನೂ ಬೀರಬಹುದು. ೪೬

ಯಾವುದರ ಮೇಲೆ ನಂಬಿಕೆ ಇಡಬೇಕು, ಯಾವುದರ ಮೇಲೆ ನಂಬಿಕೆ ಇಡಬಾರದು ಎಂಬುದು ನಮ್ಮ ಮೇಲೆ ನಿರ್ಧಾರಿತವಾಗಿರುವುದಲ್ಲದೆ, ಮಕ್ಕಳಲ್ಲಿ ಪ್ರಾರಂಭದಿಂದಲೇ ನಂಬಿಕೆ ಮೌಲ್ಯದ ಜ್ಞಾನಮೂಡಿಸುವುದು ಅತ್ಯವಶ್ಯಕ ಎಂಬುದು ಕಥೆಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿರುವುದನ್ನು ಕಾಣಬಹುದು.

****

## ದಯೆ/ಕರುಣೆ



ದಯೆಯಿಲ್ಲದ ಧರ್ಮವದೇವುದಯ್ಯ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯ.
ಕೂಡಲ ಸಂಗಮದೇವ. (ವಚನ ಸಂಗ್ರಹ)

ಎಂಬ ಬಸವಣ್ಣನವರ ಅಭಿಪ್ರಾಯದಂತೆ ಮನುಷ್ಯನ ಸುಖ ಜೀವನಕ್ಕೆ ದಯೆ, ಕರುಣೆ, ಅನುಕಂಪ ಇವೆಲ್ಲ ಅವಶ್ಯಕ ಮೌಲ್ಯವಾಗಿದೆ. ವಿಶ್ವದ ಎಲ್ಲಾ ಧರ್ಮವೂ ಸಾರುವುದು ಶಾಂತಿ ಮತ್ತು ದಯೆಯನ್ನೇ ಹೊರತು ದ್ವೇಷ ಅಸೂಯೆಯನ್ನಲ್ಲ. ಎಲ್ಲಾ ಧರ್ಮದ ತಳಹದಿ ದಯೆ. ಮಾನವೀಯತೆ ಹುಟ್ಟು ದಯಾಮಯವಾದ ಮನಸ್ಸಿನಿಂದ ಮಾತ್ರ ಸಾಧ್ಯ. ಜಗತ್ತಿನ ಎಲ್ಲಾ ಚರಾಚರ ಜೀವನಾಡಿಗಳಲ್ಲೂ ದಯೆ ಎಂಬ ಅಂತಃಕರಣವಿರಬೇಕು ಎಂದು ಬಸವಣ್ಣ ಆದಿಯಾಗಿ ಎಲ್ಲಾ ಶರಣರು ಹೇಳುವುದು ಅಕ್ಷರಶಃ ಸತ್ಯ. ದಯೆಯೇ ಇಲ್ಲದಿದ್ದರೆ ಜೀವನ ಸಾರಸಗಟಾಗಿ ನಡೆಯಲು ಸಾಧ್ಯವಿಲ್ಲ. ದಯೆಯ ಮೌಲ್ಯವನ್ನು ಮಕ್ಕಳಲ್ಲಿ ಚಿಕ್ಕಂದಿನಿಂದಲೆ ಬೆಳೆಯುವಂತೆ ಮಾಡುವುದು ನಮ್ಮೆಲ್ಲರ ಹೊಣೆಯಾಗಬೇಕು. ಬೆಳೆಯುವ ಸಿರಿ ಮೊಳಕೆಯಲ್ಲಿಯೇ ಎಂಬಂತೆ ಚಿಕ್ಕಂದಿನಿಂದಲೇ ದಯೆಯು ಮಕ್ಕಳಲ್ಲಿ ಬೆಳೆದರೆ ಅದು ದೇಶದ ಪ್ರಗತಿಗೆ ಪೂರಕವಾಗಿ ಪರಿಣಮಿಸುತ್ತದೆ ಎಂಬುದು 'ರಾಜ ರಣಜೀತ್ ಸಿಂಗ್, ರಾಜ ರಂತಿದೇವ, ಬಲತಾಯಿ

ಮತ್ತು ಮೆಚ್ಚಿನ ನಾಯಿ' ಕಥೆಗಳ ವಿಶ್ಲೇಷಣೆಯಲ್ಲಿ ಗೋಚಸಿದ್ದು, **ರಾಜ ರಂತಿದೇವ ಮತ್ತು ಮೆಚ್ಚಿನ ನಾಯಿ** ಕಥೆಯನ್ನು ನಂಬಿಕೆ ಮೌಲ್ಯದ ಶೋಧನಾ ವಿವರಣೆಗೆ ಒಳಪಡಿಸಲಾಗಿದೆ.

**೩. ರಾಜ ರಂತೀದೇವ:** ಜನರ ಕಷ್ಟಗಳಿಗೆ ಕರಗಿ ನೀರಾಗುವ, ಪ್ರಾಣಿ–ಪಕ್ಷಿ, ಪ್ರಜೆಗಳನ್ನು ತಂಬಾ ಪ್ರೀತಿಸುತ್ತಿದ್ದ, ಬಹಳ ಮೃದು ಹೃದಯಿ ರಾಜ ರಂತೀದೇವ. ಒಮ್ಮೆ ರಾಜ್ಯದಲ್ಲಿ ನೀರಿಲ್ಲದೆ, ಆಹಾರವಿಲ್ಲದೆ, ಮನುಷ್ಯ, ಪ್ರಾಣಿ–ಪಕ್ಷಿಗಳೆಲ್ಲಾ ಸಾಯುವ ಭೀಕರವಾದ ಬರಗಾಲ ಬಂದಿದ್ದರಿಂದ, ರಾಜ ಕಾಡಿಗೆ ಹೋಗಿ ತಪಸ್ಸು ಮಾಡಿದರೆ, ಪ್ರಾಯಶಃ ದೇವರಿಗೆ ತನ್ನ ಮೇಲೆ **ಕರುಣೆ** ಬಂದು ಮಳೆ ಬರಬಹುದೇನೋ ಎನ್ನುವ ಆಸೆಯಿಂದ ತಪಸ್ಸನ್ನು ಮಾಡಲು ಕಾಡಿಗೆ ಹೋದನು.

ರಾಣಿ ರಾಜನ ಉಪವಾಸವನ್ನು ನೋಡಲಾಗದೆ, ಊಟ ಕೊಟ್ಟು ಕಳುಹಿಸಿದಳು. ರಾಜ ತಿನ್ನಬೇಕು ಎನ್ನುವಷ್ಟರಲ್ಲಿ ಬಂದ ಒಬ್ಬ ರೋಗಿಗೆ, ಹಸಿದ ನಾಯಿಗೆ, ಜಿಂಕೆಗೆ, ಪಕ್ಷಿಗೆ ಊಟ ನೀರನ್ನು ಕೊಟ್ಟನು. ಇದನ್ನೆಲ್ಲಾ ದೂರದಿಂದ ಗಮನಿಸಿದ ಬೈರಾಗಿಯು ರಾಜನಿಗೆ "ನೀನು ಯಾರಿಗಾಗಿ ಈ ಕಠಿಣ ತಪಸ್ಸನ್ನು ಮಾಡುತ್ತಿರುವೆ? ನೀನೇ ಕಷ್ಟದಲ್ಲಿದ್ದಾಗಲೂ ಸಹಿತ ಪರರ ಬಗೆಗಿನ ಕರುಣೆಯಿಂದ ಸಹಾಯ ಮಾಡುತ್ತಿರುವ ನಿನ್ನನ್ನು ದೇವರು ಮೆಚ್ಚಿ ನಿನ್ನೆದುರಿಗೆ ಬಂದರೆ ನೀನೇನು ಕೇಳುತ್ತೀ?" ಎಂದ. ಅದಕ್ಕೆ ರಾಜ "ಓ ಸನ್ಯಾಸಿ ನಾನು ದೇವರನ್ನು ಕೇಳುವುದಿಷ್ಟೆ,

ನತ್ವಹಂ ಕಾಮಯೇ ರಾಜ್ಯಂ
ನ ಸ್ವರ್ಗಂ ನಾ ಪುನರ್ಭವಂ
ಕಾಮಯೇ ದುಃಖತಪ್ತಾನಾಂ
ಪ್ರಾಣಿನಾಂ ಆರ್ತಿ ನಾಶನಾಂ

ಅಂದರೆ ನನಗೆ ರಾಜ್ಯ ಬೇಡ, ಸ್ವರ್ಗ ಬೇಡ, ಪುನರ್ಜನ್ಮವೂ ಬೇಡ, ದೇವರೇ ನೀನು ನನಗೇನಾದರೂ ಕೊಡುವ ಹಾಗಿದ್ದರೆ, ಮತ್ತೊಬ್ಬರ ದುಃಖಕ್ಕೆ ಸ್ಪಂದಿಸುವ ಹೃದಯವನ್ನು ಮಾತ್ರ ಕೊಡು" ಎಂದ. ತಕ್ಷಣ ಮಳೆ ಬರತೊಡಗಿತು. ದಯೆ, ಕರುಣೆ, ಅನುಕಂಪ ಮೌಲ್ಯಕ್ಕೆ ದೇವರು ಪ್ರತಿಕ್ರಿಯಿಸುತ್ತಾರೆ ಎಂಬ ನೀತಿಯುಕ್ತವಾದ ಕಥೆಯು ಮಕ್ಕಳ ಮೇಲೆ ಅಚ್ಚಳಿಯದ ಪ್ರಭಾವ ಬೀರುವ ಸಾಧ್ಯತೆಯ ಸತ್ಯವನ್ನು ನೋಡಬಹುದು.

**೪. ಮೆಚ್ಚಿನ ನಾಯಿ:** ಶ್ರೀಪುರದಲ್ಲಿ ಮಕ್ಕಳಿಲ್ಲದ ನರಸಿಂಹ ಮತ್ತು ಲಕ್ಷ್ಮಿ ಮುದುಕ ದಂಪತಿಗಳು ಬಡತನದಿಂದ ಜೀವನ ಸಾಗಿಸುತ್ತಿದ್ದರು. ಒಂದು ದಿನ ಅವರು ಕೂಲಿ ಮಾಡಲು ಹೋಗಿ ಹಿಂತಿರುಗುವಾಗ, ಒಂದು ಸಣ್ಣ ನಾಯಿ ಗಾಯಗೊಂಡು ಮಳೆಯಲ್ಲಿ ನೆನೆಯುತ್ತ ಬಿದ್ದಿರುವುದನ್ನು ಕಂಡು ಲಕ್ಷ್ಮಿ ಕರುಣೆಯಿಂದ ಅದನ್ನು ಮನೆಗೆ ತಂದು ಚಿಕಿತ್ಸೆ ಮಾಡಿದಳು. ನಾಯಿಯ ಆರೋಗ್ಯವು ಸುಧಾರಿಸಿ, ಅದು ಅವರ ಮನೆಯನ್ನು ಬಿಟ್ಟು ಹೋಗದೇ ಅವರ ಜೊತೆಯಲ್ಲೇ ಇರಲು ಪ್ರಾರಂಭಿಸಿತು.

ಮಕ್ಕಳಿಲ್ಲದ್ದರಿಂದ ಅವರು ನಾಯಿಗೆ ರಾಜು ಎಂದು ಹೆಸರಿಟ್ಟು ತುಂಬಾ ಪ್ರೀತಿಯಿಂದ ಸಾಕುತ್ತಿದ್ದರು. ಒಂದು ದಿನ ನರಸಿಂಹ ಮತ್ತು ಲಕ್ಷ್ಮಿ "ತಮಗೆ ಬಡತನವಿದ್ದರೂ ಸಹಾಯ ಮಾಡುವವರು ಯಾರೂ ಇಲ್ಲವೆಂದೂ, ಅದರೊಂದಿಗೆ ಈಗ ವೃದ್ಧಾಪ್ಯವೂ ಸೇರಿ ಬದುಕಲು ತುಂಬಾ ಕಷ್ಟವಾಗಿದೆ" ಎಂದು ಮಾತನಾಡಿಕೊಳ್ಳುತಿದ್ದುದನ್ನು ಕೇಳಿಸಿಕೊಂಡ ರಾಜುವು ಹೊರಗೆ ಓಡಿ ಸ್ವಲ್ಪ ಹೊತ್ತಿನ ಬಳಿಕ ಇವರ ಬಳಿ ಬಂದು ನರಸಿಂಹನ ಅಂಗಿಯ ಅಂಚನ್ನು ಎಳೆಯತೊಡಗಿತು. ಹಾಗೆ ಎಳೆಯುತ್ತಾ ಹಿತ್ತಲಿನ ಮೂಲೆಗೆ ಕರೆದುಕೊಂಡು ಹೋಗಿ ಮಣ್ಣನ್ನು ಅಗೆದು ತೋರಿಸಿತು. ಇದನ್ನು ಗಮನಿಸಿದ ನರಸಿಂಹ ಅಲ್ಲಿನ ಮಣ್ಣನ್ನು ಅಗೆದಾಗ, ಚಿನ್ನದ ನಾಣ್ಯ ತುಂಬಿದ ಪಾತ್ರೆ ಸಿಕ್ಕಿತು. ಅಂದಿನಿಂದ ಅವರ ಬಡತನ ನೀಗಿ ಸಂತೋಷದಿಂದ ಬಾಳ್ವೆ ನಡೆಸುವಂತಾಯಿತು.

ದಯೆ ಎಂಬುದು ಪ್ರೀತಿ ಪ್ರತಿರೂಪದಂತಿದ್ದು, ಕಷ್ಟದಲ್ಲಿ, ತೊಂದರೆಯಲ್ಲಿದ್ದವರೊಂದಿಗೆ ಬೆರೆತು ಸಹಕರಿಸುವುದಾಗಿದೆ. ಆದರೆ ಇಂದಿನ ದಿನಗಳಲ್ಲಿ ದಯೆ, ಕರುಣೆ ಮಾಯವಾಗಿದೆ. ಸಹಾಯದ ಹಸ್ತಕ್ಕಾಗಿ ಅಂಗಲಾಚಿ ಬೇಡುವವರನ್ನು ರಸ್ತೆಯಲ್ಲಿ, ಬೀದಿಯಲ್ಲಿ, ದೇವಸ್ಥಾನಗಳಲ್ಲಿ ಕಂಡರೂ, ಕಾಣದಂತೆ ಹೋಗುವ ಪ್ರವೃತ್ತಿ ಹೆಚ್ಚಾಗಿದೆ. ಮನುಷ್ಯರಿಗೆ ಮಾತ್ರವಲ್ಲದೆ, ಪ್ರಾಣಿ-ಪಕ್ಷಿಗಳಿಗೂ ಕರುಣೆಯ ಅವಶ್ಯಕತೆ ಇದೆ. ತಾನು ಬದುಕಿ ಇತರರು ಬದುಕು ನಡೆಸಲು ದಯೆಯು ಅವಶ್ಯವಾದುದಾಗಿದ್ದು, ಮಕ್ಕಳಲ್ಲಿ ದಯೆ ಕರುಣೆಯ ಮೌಲ್ಯವನ್ನು ಬೆಳೆಯುವಂತೆ ಮಾಡುವಲ್ಲಿ ಪ್ರಸ್ತುತ ಪಡಿಸಿದ ಎರಡು ಕತೆಗಳು ಪ್ರೇರೇಪಿತವಾಗಿರುವ ಸಂದರ್ಭವನ್ನು ಕಾಣಬಹುದು.

****

# ಪರೋಪಕಾರ



"ಮನುಷ್ಯ ಜೀವನವನ್ನು ಸ್ವಾರ್ಥಕ್ಕಾಗಿ ಬಳಕೆ ಮಾಡಿಕೊಳ್ಳದೇ ಪರೋಪಕಾರಕ್ಕಾಗಿ ಬಳಸಿದಾಗ ಮಾತ್ರ ಜೀವನದಲ್ಲಿ ತೃಪ್ತಿಯಿಂದ ಇರಲು ಸಾಧ್ಯ" ಎಂದು ಹುಕ್ಕೇರಿ ಮಠದ ಸದಾಶಿವ ಶ್ರೀಗಳು (೩.೪.೨೦೧೫ ರ ಪ್ರಜಾವಾಣಿ ಪತ್ರಿಕೆ) ಹೇಳಿರುವುದರಲ್ಲಿ ಪರೋಪಕಾರದ ಹೊಸ ಹೋಳಪನ್ನು ಕಾಣಬಹುದು.

'ಪರೋಪಕಾರಾರ್ಥಂ ಇದಂ ಶರೀರಂ' ಎಂಬಂತೆ, ಕರ್ತಾರನಿಂದ ಜನ್ಮ ಪಡೆದ ಮನುಷ್ಯ ಸಮಾಜಮುಖಿ ಚಿಂತನೆಯಿಂದ ಕೂಡಿರಬೇಕು. ಆದರೆ ದುರದುಷ್ಟತೆಯಿಂದ ಸಮಾಜಮುಖಿ ಚಿಂತನೆ ಮಾಡುವುದನ್ನು ಬಿಟ್ಟಿದ್ದಾನೆ. ಕೇವಲ ತನ್ನ ಕುಟುಂಬ ಇಲ್ಲವೇ ವೈಯಕ್ತಿಕ ಅಗತ್ಯತೆಯ ಸ್ವಾರ್ಥಕ್ಕಾಗಿ ಜೀವನದ ಬಹುಪಾಲು ಸಮಯವನ್ನು ಮೀಸಲಿಟ್ಟು, ಅಂತರ್ಮುಖಿಯಾಗಿ ತನ್ನ ಜೀವನದ ಸಂತೋಷವನ್ನು ಕಳೆದುಕೊಳ್ಳುತ್ತಿದ್ದಾನೆ. ಅಲ್ಲದೆ ಇಂದಿನ ದಿನಗಳಲ್ಲಿ ವಿಧ್ಯಾವಂತ ತಿಳಿದವರಲ್ಲಿ ಸ್ವಾರ್ಥತನವು ಹೆಚ್ಚಾಗುತ್ತಿದೆ. ಕೌಟುಂಬಿಕ ಹಿತಾಸಕ್ತಿಗೆ ಸೀಮಿತಗೊಳ್ಳುವ ಜನರ ಸಂಖ್ಯೆ ಹೆಚ್ಚಾಗುತ್ತಿದೆ. ಸಮಾಜದ ಸಮಸ್ಯೆಯನ್ನು ಉಪೇಕ್ಷಿಸಿ, ಪರರ ಹಿತ ಕಡೆಗಣಿಸುವುದರಿಂದ ಯಾರಿಗೂ ಲಾಭವಿಲ್ಲ. ಜೊತೆಗೆ ಸಮಾಜಕ್ಕೆ ಒಳ್ಳೆಯದಲ್ಲ. ಈ ದೃಷ್ಟಿಯಿಂದ ಪರೋಪಕಾರದ ಮಹತ್ವವನ್ನು 'ಬಣ್ಣದ ರೇಷ್ಮೆ ಚೀಲ, ಚಿತ್ರಕಾರ, ಪರೋಪಕಾರ ಮತ್ತು ಚಿನ್ನದ ನರಿ' ದಟ್ಟವಾಗಿ ಕಾಣಲಾಗಿದ್ದು, **ಬಣ್ಣದ ರೇಷ್ಮೆ ಚೀಲ** ಕಥೆಯಲ್ಲಿನ ಪರೋಪಕಾರ ಮೌಲ್ಯದ ಹಿರಿಮೆಯನ್ನು, ಅನುಕೂಲವನ್ನು ಒಟ್ಟಿಗೆ ಧ್ವನಿಸುವುದನ್ನು ಶೋದಿಸಲಾಗಿದೆ.

**೫. ಬಣ್ಣದ ರೇಷ್ಮೆ ಚೀಲ:** ಕನಕವಲ್ಲಿ ಶ್ರೀಮಂತ ಜಮೀನ್ದಾರ ದಂಪತಿಗಳ ಒಬ್ಬಳೇ ಮಗಳಾಗಿದ್ದು, ಸಿರಿವಂತಳಿದ್ದರೂ, ವಿಶಾಲ ಹೃದಯದ ಹುಡುಗಿ. ಬಡತನ ತಿಳಿಯದಿದ್ದರೂ, ಬಡವರನ್ನು ಕಂಡರೆ ಅಯ್ಯೋ ಎಂದು ಮರುಗಿ ಸಹಾಯ ಮಾಡುತ್ತಿದ್ದಳು.

ಪರೋಪಕಾರ ಸ್ವಭಾವದ ಕನಕವಲ್ಲಿಗೆ ಮದುವೆಯಾಗಿ ವರನ ಊರಿಗೆ ದಿಬ್ಬಣ ಹೊರಟಾಗ ಅವಳ ಆಪ್ತ ದಾಸಿ, ಸ್ನೇಹಿತೆ ವಾರಿಜಾಳು ಅವಳ ಜೊತೆ ಹೊರಟಳು. ಹೊರಡುವ ಮುನ್ನ ಕನಕಾಳ ತಾಯಿ ಅವಳಿಗೆ "ಮಗು, ರೇಷ್ಮೆ ಕೈಚೀಲದಲ್ಲಿ ಮಹತ್ವದ ಬಾಗೀನ ಇರಿಸಿದ್ದೇನೆ. ನಿನಗೆ ಜೀವನದಲ್ಲಿ ಅದು ಶುಭ ತರುತ್ತದೆ" ಎಂದು ಕೈಗೆ ಇತ್ತಳು. ದಿಬ್ಬಣ ಜಡಿಮಳೆ ಹಾಗೂ ಸಂಜೆ ಹೊತ್ತಾದ ಕಾರಣ ಒಂದು ದೇವಾಲಯದಲ್ಲಿ ಬೀಡು ಬಿಟ್ಟಿತು. ದೇವಾಲಯದ ಮತ್ತೊಂದು ಮೂಲೆಯಲ್ಲಿ ಮತ್ತೊಬ್ಬ ಅನಾಥ ಮದುಮಗಳು, "ತೌರು ಮನೆಯ ಉಡುಗೊರೆ ಏನೂ ಇಲ್ಲವೆಂದು, ಅತ್ತೆ ಮನೆಯವರು ಹಂಗಿಸಬಹುದೆಂದು" ಭಯದಿಂದ ಅಳುತ್ತಿದ್ದುದನ್ನು ಕಂಡು ಕನಿಕರಗೊಂಡು, ತನ್ನ ತಾಯಿ ನೀಡಿದ್ದ ರೇಷ್ಮೆ ಚೀಲವನ್ನು ತಾನು ಸಿರಿವಂತ ಕುಟುಂಬದಲ್ಲಿ ಹುಟ್ಟಿದ್ದರಿಂದ ತನಗೆ ಆ ಚೀಲದ ಅಗತ್ಯ ಬೀಳುವುದಿಲ್ಲವೆಂದು ಆ ಮದುಮಗಳಿಗೆ ನೀಡಿ ಸಹಾಯ ಮಾಡಿದಳು.



ಕಾಲ ಉರುಳಿತು. ದುರದೃಷ್ಟತೆಯಿಂದ ಕನಕವಲ್ಲಿಯ ಗಂಡ, ಅತ್ತೆ, ಮಗು ಎಲ್ಲರೂ ಬಿರು ಅಲೆಗೆ ಸಿಕ್ಕಿ ಕಾಣೆಯಾದರು. ಎಷ್ಟು ಹುಡುಕಿದರೂ ಸಿಗಲಿಲ್ಲ. ಬಡತನವು ಅವಳನ್ನು ಮುತ್ತಿತು. ಹೊಟ್ಟೆಗಾಗಿ ನೆರೆ ಊರಿನ ಪ್ರಾಗ್ ಜ್ಯೋತಿಷ್ಪುರದ ಧರ್ಮಶಾಲೆಗೆ ಬಂದಳು. ಅಲ್ಲಿ ಇವಳ ಸರದಿಗೆ ಅನ್ನವೆಲ್ಲ ಮುಗಿದು, ಕನಕವಲ್ಲಿಗೆ ಅನ್ನವು ದೊರೆಯಿತು. ಆದರೆ ಒಬ್ಬ ಮುದುಕಿಗೆ ಅನ್ನ ಸಿಗದೆ ಹಸಿದಿದ್ದನ್ನು ಕಂಡು ತನ್ನಲ್ಲಿದ್ದ ಅನ್ನವನ್ನು ಅವಳಿಗೆ ನೀಡಿದಳು. ಕಷ್ಟದಲ್ಲಿಯೂ ಸಹಾಯ ಮಾಡುವ ಕನಕವಲ್ಲಿಯ ಗುಣ ನೋಡಿ, ಅಡುಗೆಯವ ಪರೋಪಕಾರಿ ಶ್ರೀಮಂತ ವಿಶ್ವಗುಪ್ತನ ಮನೆಗೆ ಹೋಗುವಂತೆ ಹೇಳಿದ. ಅದರಂತೆ ಅಲ್ಲಿಗೆ ಹೋದಾಗ ಕನಕವಲ್ಲಿಗೆ ಮಗುವನ್ನು ಹಾರೈಕೆ ಮಾಡುವ ಕೆಲಸ ಸಿಕ್ಕಿತು.

ಒಮ್ಮೆ ಕನಕವಲ್ಲಿ ಆಡುತ್ತಿದ್ದ ಮಗುವಿನ ಚೆಂಡನ್ನು ತರಲು, ಯಾರೂ ಹೋಗಬಾರದೆಂಬ ಕಟ್ಟಾಜ್ಞೆ ಇದ್ದ ದೇವಾಲಯಕ್ಕೆ ಹೋದಾಗ ಅಲ್ಲಿ ತನ್ನ ತಾಯಿ ನೀಡಿದ ರೇಷ್ಮೆ ಚೀಲ ನೋಡಿ ದುಃಖಿತಳಾದಳು. ಇದನ್ನು ಗಮನಿಸಿದ ಹೇಮನಂದಿನಿ ವಿಚಾರಿಸಲಾಗಿ, ಅದು ಕನಕವಲ್ಲಿಯ ಚೀಲವೆಂದು, ತನಗೆ ಸಹಾಯ ಮಾಡಿದವಳು ಕನಕವಲ್ಲಿಯೆಂದು ತಿಳಿದು ಅವಳಿಗೆ ಕೃತಜ್ಞತೆಯನ್ನು ಅರ್ಪಿಸಿ, ಕನಕವಲ್ಲಿಯ ಸ್ಥಿತಿಯನ್ನು ಸುಧಾರಿಸಿದಳು. ಗಂಡ ಮಗುವನ್ನು ಹುಡುಕಿಸಿ ಕೊಟ್ಟಳು. ಶ್ರೀಮಂತಳಾದ ಕನಕವಲ್ಲಿ ತನ್ನಲ್ಲಿರುವುದಕ್ಕೆ ಅತಿಯಾಸೆ ಪಡದೆ, ಅವಶ್ಯವಿದ್ದವರಿಗೆ ತನ್ನ ಕೈಲಾದ ಸಹಾಯ ಮಾಡಿದಳು. ಅಲ್ಲದೆ ಪರರಿಗೆ ಉಪಕರಿಸುತ್ತಿದ್ದಳು. ಅದರಂತೆ ಹೇಮನಂದಿನಿಯೂ ಸಹ

ತನಗೆ ಅಗತ್ಯವಿದ್ದಾಗ ಸಹಕರಿಸಿದ ಕನಕವಲ್ಲಿ ಪರಿಚಯವಿಲ್ಲದಿದ್ದರೂ, ಅವಳು ನೀಡಿದ ಧನ ಸಹಾಯದಿಂದ ಧನಿಕಳಾದಾಗ ಅಹಂಕಾರಕ್ಕೆ ಒಳಗಾಗದೆ, ಅವಳು ಎಂದಾದರೂ ಸಿಗಬಹುದೆಂದು ಅವಳಿಗೆ ಕೃತಜ್ಞತೆಯನ್ನು ಅರ್ಪಿಸಲು ಕಾಯುತ್ತಿದ್ದಳು.

ನಾವು ಎಂದೋ ಮಾಡಿದ ಸಹಾಯವು ನಮಗೆ ಆಪತ್ಕಾಲದಲ್ಲಿ ನಮ್ಮ ಅರಿವಿಗೆ ಬಾರದಂತೆ ಸಹಕಾರಿಯಾಗುವುದು. ಪ್ರಕೃತಿಯಲ್ಲಿನ ಗಿಡ–ಮರ, ಪ್ರಾಣಿ–ಪಕ್ಷಿಗಳು ನಮಗೆ ತಿಳಿಯದಂತೆ, ಎಷ್ಟೋ ರೀತಿಯಲ್ಲಿ ಸಹಕರಿಸುತ್ತವೆ. ಅಂತಹದರಲ್ಲಿ ಇತರ ಜೀವಿಗಳಿಗಿಂತ ವಿಶಿಷ್ಟ ಎಂದು ಕರೆಸಿಕೊಂಡ ಮಾನವರಾದ ನಾವು ಇತರರ ಅಗತ್ಯಗಳನ್ನು ಗಮನಿಸಿ ಸಹಕರಿಸದಿದ್ದರೆ ನಮ್ಮ ವಿಶಿಷ್ಟತೆಯು ವ್ಯರ್ಥವಾದಂತೆ. ನಾವೇನು ಹುಟ್ಟಿನಿಂದಲೇ ಎಲ್ಲವನ್ನು ಪಡೆದುಕೊಂಡು ಬಂದವರಲ್ಲ. ಪ್ರಕೃತಿದತ್ತವಾಗಿ ಪಡೆದುದನ್ನೆ ತಮ್ಮಲ್ಲಿ ಮತ್ತು ಇತರರಲ್ಲಿ ಹಂಚಿಕೊಳ್ಳುವುದರ ಮೂಲಕ ತಾವು ಬದುಕಬೇಕು, ಇತರರು ಬದುಕಲು ಸಹಕರಿಸಬೇಕೆಂಬುದು ಉತ್ತಮವಾಗಿ ಚಿತ್ರಿತಗೊಳ್ಳುವುದರ ಮೂಲಕ ಕಥೆಯಲ್ಲಿ ಮಾರ್ಮಿಕವಾಗಿ ಮೂಡಿಬಂದಿರುವುದನ್ನು ಕಾಣಬಹುದು. ಅಲ್ಲದೆ, ನಮ್ಮ ಹಿರಿಯರು ಹೇಳುತ್ತಿದ್ದಂತೆ "ನಮ್ಮ ಕೈಲಾದಷ್ಟು, ಇರುವುದರಲ್ಲಿ ಒಂದಷ್ಟನ್ನು ಪರರ ಉಪಕಾರಕ್ಕಾಗಿ ಬಳಸಿದರೆ, ಅದರಿಂದ ನಮಗೂ ಒಳ್ಳೆಯದು, ಸಮಾಜಕ್ಕೂ ಒಳ್ಳೆಯದು" ಎಂಬುದನ್ನು ಸಾರುವಲ್ಲಿ, ಪರೋಪಕಾರ ಮೌಲ್ಯದ ಜೊತೆಯಲ್ಲಿಯೇ ಕೃತಜ್ಞತಾ ಮೌಲ್ಯದ ಸಾಧ್ಯತೆಯನ್ನು ಈ ಕಥೆಯು ತಿಳಿಸುವುದನ್ನು ಚಿತ್ರಿಸಲಾಗಿದೆ

****

## ಚಾತುರ್ಯ





ಸೃಷ್ಟಿಕರ್ತನ ಈ ಸೃಷ್ಟಿಯಲ್ಲಿನ ಪ್ರತಿಯೊಂದು ಜೀವಿಯಲ್ಲಿ ಮಾನವನು ವಿಶೇಷ ಹಾಗೂ ವಿಭಿನ್ನ ಗುಣಗಳಿಂದ ಶ್ರೇಷ್ಠತೆ, ಭಿನ್ನತೆಯನ್ನು ಪಡೆದಿದ್ದಾನೆ. ಅವನ ಹಲವಾರು ಗುಣಗಳಲ್ಲಿ ಚಾತುರ್ಯವು ಒಂದು.

ಜಗತ್ತಿನಲ್ಲಿ ಸತ್ಯ-ಅಸತ್ಯ, ಒಳ್ಳೆಯದು-ಕೆಟ್ಟದ್ದು ಜೋಡಿ ಹಕ್ಕಿಗಳಂತೆ ತನ್ನ ಪ್ರಭಾವವನ್ನು ಮನುಕುಲದ ಮೇಲೆ ಬೀರಿವೆ. ಅಸತ್ಯದಿಂದ, ಕೆಟ್ಟದ್ದರಿಂದ ರಕ್ಷಿಸಿಕೊಳ್ಳುವುದಕ್ಕೆ ಭಗವಂತ ಚಾತುರ್ಯವನ್ನು ಕೊಟ್ಟಿದ್ದಾನೆ. 'ಚತುರತೆಯನ್ನು ಉಪಯೋಗಿಸಿಕೊಂಡು ಯಾವುದೇ ಪರಿಹಾರ ನೀಡುವವರೇ ಚತುರರು' ಎನಿಸಿಕೊಳ್ಳುವರು. 'ಬುದ್ದಿವಂತ ವ್ಯಾಪಾರಿ, ಇಲಿ ತಂದ ಸೌಭಾಗ್ಯ, ತಮಟೆ, ಮಾತಿನ ಮಲ್ಲಿ, ಸುಳ್ಳಿನ ಪುಸ್ತಕ, ಜಾಣ ಗೃಹಿಣಿ, ಮಂಗಗಳಾಟ' ಮೊದಲಾದವು ಸೇರಿದಂತೆ ಒಟ್ಟು ೨೯ ಕಥೆಗಳಲ್ಲಿ ಚತುರತೆಯ ಗುಣ ಮೌಲ್ಯವಾಗಿ ಪರಿವರ್ತಿತಗೊಂಡುದುದನ್ನು ಚಿತ್ರಿಸಲಾಗಿದೆ. **'ಇಲಿ ತಂದ ಸೌಭಾಗ್ಯ ಮತ್ತು ಮಂಗಗಳಾಟ'** ಕಥೆಯನ್ನು ವಿಶ್ಲೇಷಿಸುವ ಮೂಲಕ ಮಕ್ಕಳಲ್ಲಿ ಚತುರತೆ ಮೌಲ್ಯವನ್ನು ಬೆಳೆಸುವ ಸಾಧ್ಯತೆಯನ್ನು ಗುರ್ತಿಸಲಾಗಿದೆ.

**೬. ಇಲಿ ತಂದ ಸೌಭಾಗ್ಯ:** ಶಿವಾನಂದ ಬಡವನಾದರೂ ಬುದ್ದಿವಂತ ಚತುರ ಹುಡುಗ. ಹಣದ ಸಹಾಯ ಸಿಕ್ಕರೆ ಒಳ್ಳೆಯ ವ್ಯಾಪಾರ ಮಾಡಬಹುದೆಂದು ಊರಲ್ಲಿನ ಹಣವಂತನ ಹತ್ತಿರ ಹಣದ ಸಹಾಯ ಕೇಳಿದಾಗ, ಆತ **'ಒಂದು ಸತ್ತ ಇಲಿಯನ್ನು ನೀಡಿ ಹಣವಂತನಾಗು'** ಎಂದು ಹೇಳಿ ಕಳುಹಿಸುವನು. ಸತ್ತ ಇಲಿಯನ್ನು ಶಿವಾನಂದ ತೆಗೆದುಕೊಂಡು ಹೋಗುತ್ತಿದ್ದಾಗ, ಶ್ರೀಮಂತನೊಬ್ಬ ಒಂದು ತೂಕದಷ್ಟು ನೆಲಗಡಲೆ ನೀಡುವುದಾಗಿ, ತನ್ನ ಬೆಕ್ಕಿಗೆ ಆ ಸತ್ತ ಇಲಿಯನ್ನು ನೀಡಬೇಕಾಗಿ ಹೇಳಿದನು. ಶಿವಾನಂದ ಅದಕ್ಕೆ ತಕ್ಷಣ ಒಪ್ಪಿ ಸತ್ತ ಇಲಿಯನ್ನು ನೀಡಿ, ನೆಲಗಡಲೆಯನ್ನು ಪಡೆದನು. ತನ್ನ ಚತುರತೆಯಿಂದ ಬುದ್ದಿಯನ್ನು ಉಪಯೋಗಿಸಿ ನೆಲಗಡಲೆಯೊಂದಿಗೆ ನೀರನ್ನು ಇಟ್ಟುಕೊಂಡು ದಾರಿಯಲ್ಲಿ ಕುಳಿತು, ಕಟ್ಟಿಗೆ ಹೊತ್ತುಕೊಂಡು ಬಂದವರಿಗೆ ಅದನ್ನು ನೀಡಿ ಅವರಿಂದ ಸ್ವಲ್ಪ ಸ್ವಲ್ಪ ಕಟ್ಟಿಗೆಯನ್ನು ಪಡೆದನು. ಹೀಗೆ ಮಾಡುತ್ತಾ ಒಂದು ಸಣ್ಣ ವ್ಯಾಪಾರ ಪ್ರಾರಂಭಿಸಿದನು. ಕಾಲ ಬದಲಾದಂತೆ ವ್ಯಾಪಾರ ವಿಸ್ತರಿಸಿತು. ಶಿವಾನಂದನ ಸ್ಥಿತಿ ಸುದಾರಿಸಿ ಶ್ರೀಮಂತನಾದನು. ಇದು ಸಾಧ್ಯವಾದದ್ದು ಆತನ ಚತುರತೆಯಿಂದ. ಸತ್ತ ಇಲಿ ಅಂದರೆ **ಕಸದಿಂದ ರಸವನ್ನು ತೆಗೆದು ಚತುರತೆ ಮೌಲ್ಯಕ್ಕೆ ಮಾದರಿಯಾದುದನ್ನು** ಕಾಣಲಾಗಿದೆ.

**೭. ಮಂಗಗಳಾಟ:** ಒಳ್ಳೆಯ ಸ್ವಭಾವದ ಸ್ನೇಹಿತರಾದ ಕಿರಣ ಮತ್ತು ವರುಣ ಪ್ರಯಾಣ ಮಾಡುತ್ತಿದ್ದಾಗ ಧಾರಾಕಾರ ಮಳೆಯಿಂದಾಗಿ ಒಂದು ಆಲದಮರದ ಕೆಳಗೆ ನಿಂತರು. ಅಲ್ಲಿ ದೊರೆತ ಚಿನ್ನದ ನಾಣ್ಯದ ಮಡಕೆಯಿಂದ, ಇಬ್ಬರೂ ಸಮವಾಗಿ ನಾಣ್ಯಗಳನ್ನು ಹಂಚಿಕೊಂಡರು. ಕತ್ತಲಾದ್ದರಿಂದ ಇಬ್ಬರು ಒಂದು ಮರದ ಕೆಳಗೆ ಮಲಗಿಕೊಂಡಾಗ, ವರುಣ ಕಿರಣನ ಚಿನ್ನವನ್ನೆಲ್ಲ ತೆಗೆದುಕೊಂಡನು. ಮಾಯದ ಮಡಕೆಯಾದದ್ದರಿಂದ

ಚಿನ್ನವೆಲ್ಲ ಮಂತ್ರದಿಂದಾಗಿ ಕಲ್ಲಾಗಿದೆ ಎಂದು ಕಿರಣನಿಗೆ ಹೇಳಿದನು. ಕಿರಣ ಇಲ್ಲೇನೋ ಮೋಸ ನಡೆದಿದೆ ಎಂದು ಅರ್ಥೈಸಿಕೊಂಡು ಅವನೊಂದಿಗೆ ತಕರಾರು ಮಾಡದೆ ಚತುರತೆಯಿಂದ ವರ್ತಿಸಿದನು.

ವರುಣನಂತೆ ಪ್ರತಿಮೆ ಮಾಡಿಸಿ ಅದರ ತೊಡೆಯ ಮೇಲೆ ಮಂಗಗಳು ಕೂತಾಗ ಮಾತ್ರ ಅವಕ್ಕೆ ಊಟ ನೀಡುವ ಅಭ್ಯಾಸ ಮಾಡಿಸಿದನು. ಒಂದು ದಿನ ವರುಣನ ಎರಡು ಮಕ್ಕಳನ್ನು ಊಟಕ್ಕೆ ಕರೆದು ಚೆನ್ನಾಗಿ ತಿನ್ನಿಸಿ, ಒಂದು ಕೋಣೆಯಲ್ಲಿ ಅವರನ್ನು ಮಲಗಿಸಿ ಕೋಣೆಗೆ ಬೀಗ ಹಾಕಿದನು. ತನ್ನ ಮಕ್ಕಳನ್ನು ಹುಡುಕಿಕೊಂಡು ಬಂದ ವರುಣ ಕಿರಣನ ಮನೆಯಲ್ಲಿ ಕುಳಿತುಕೊಳ್ಳುತ್ತಿದ್ದಂತೆ ಆ ಕೋತಿಗಳು ಅವನ ತೊಡೆ ಏರಿ ಕುಳಿತವು.

ಇದೇನನ್ನೂ ತಿಳಿಯದ ವರುಣ, "ನನ್ನ ಮಕ್ಕಳೆಲ್ಲಿ? ಈ ಮರಿ ಮಂಗಗಳು ನನ್ನ ಬೆನ್ನು ಏಕೆ ಹತ್ತಿವೆ?" ಎಂದ. "ಅವು ನಿನ್ನ ಮಕ್ಕಳೇ. ನಿನ್ನನ್ನು ಕಂಡು ಪ್ರೀತಿಯಿಂದ ಬಂದು ನಿನ್ನ ತೊಡೆಯೇರಿವೆ" ಎಂದ ಕಿರಣ ಶಾಂತವಾಗಿ. ಇದಕ್ಕೆ ಒಪ್ಪದಿದ್ದಾಗ ಕಿರಣ 'ಹೇಗೆ ರಾತ್ರಿಯೊಂದರಲ್ಲಿ ಚಿನ್ನ ಕಲ್ಲಾಗುವುದೋ ಹಾಗೆಯೇ ಮಕ್ಕಳು ಮಂಗಗಳಾದವು" ಎಂದ. ತನ್ನ ಮೋಸ ತಿಳಿಯಿತೆಂದು ವರುಣ ಕಿರಣನಿಗೆ ನ್ಯಾಯವಾಗಿ ದಕ್ಕ ಬೇಕಾದ ಅರ್ದಪಾಲು ಚಿನ್ನ ಕೊಟ್ಟು ತನ್ನ ಮಕ್ಕಳನ್ನು ಪಡೆದ.

**ಚತುರತೆ ಎಂಬುದು ಬೆಳಕಾಗಿದ್ದು,** ದುರ್ನಡತೆಯನ್ನು ಕೆಟ್ಟದ್ದನ್ನು ದೂರ ಮಾಡುವುದು. ಚತುರತೆ ಇಲ್ಲದಿದ್ದರೆ ದುರುಳತನವೇ ಎಲ್ಲೆಡೆ ರಾರಾಜಿಸುತ್ತಿತ್ತು. **ದುರುಳತನವನ್ನು ಹತೋಟಿಯಲ್ಲಿಟ್ಟು, ಒಳ್ಳೆಯತನವನ್ನು ಮೇಲೆತ್ತಲು ಚತುರತೆಯು ಪರಿಣಾಮಕಾರಿಯಾಗಿದೆ.** ಅಲ್ಲದೆ ಅಂಜಿಕೆಗೆ ಮದ್ದು ಚತುರತೆಯಾಗಿದ್ದು, ಸಂಕಟ ಪರಿಸ್ಥಿತಿ ಉಂಟಾದಾಗ ಅಂಜಿಕೆಯನ್ನು ದೂರ ಸರಿಸಿ ತನ್ನ ಬುದ್ಧಿ ಕುಶಲತೆಗಳನ್ನು ಉಪಯೋಗಿಸಿಕೊಂಡು, ಬಂದ ಸಂಕಟದಿಂದ ಹೊರಬರಲು ಚತುರತೆಯಿಂದ ಮಾತ್ರ ಸಾಧ್ಯ ಎಂಬುದನ್ನು ಕಥೆಯಲ್ಲಿ ಕಾಣಲಾಗಿದೆ. ಆದುದರಿಂದ ದೈಹಿಕ ಬಲವಿದ್ದರೆ ಸಾಲದು, ಜೊತೆಗೆ ಮಾನಸಿಕ ಬಲವು ಇರಬೇಕು ಎಂಬುದರ ಸಾಧ್ಯತೆಯನ್ನು ಕಥೆಯಲ್ಲಿ ಮನೋಜ್ಞವಾಗಿ ತಿಳಿಸಲಾಗಿದೆ.

****

# ದಾನ



ಕೊಟ್ಟುಂಬ ಕಾಲದಲಿ I ಕೊಟ್ಟಣ್ಣದೊಲ್ಲದವ I
ಹುಟ್ಟಿಯ ಮೇಲೆ ಜೇನಿಟ್ಟು ಪರರಿಗೆ I
ಕೊಟ್ಟು ಹೋದಂತೆ ಸರ್ವಜ್ಞ
(ಸರ್ವಜ್ಞ ವಚನ ಸಂಪದ. ಮಾಗಡಿ ರಂಗನರಸಿಂಯ್ಯ. ವಿಜಯವಾಹಿನಿ ಪಬ್ಲಿಕೇಷನ್ಸ್ ಪು-೬೨)

ಎಂಬಂತೆ ದಾನದಿಂದ ಕೊಟ್ಟವನು ದೊಡ್ಡವನಾಗುತ್ತಾನೆ. ದಾನದ ಹಿಂದೆ ಇಲ್ಲದವರಿಗೆ ಇರುವವರು ಸಹಾಯ ನೀಡುವ ಮೂಲಕ ಮತ್ತೊಬ್ಬರ ಅಗತ್ಯ ಪೂರೈಕೆಯಾಗುವ ಆಶಯವಿರುವುದು. ಮನಃಪೂರ್ವಕವಾಗಿ ದೇವರಿಗೆ ಅರ್ಪಿಸುತ್ತಿದ್ದೇವೆ ಎಂದು ಚಿತ್ತ ಶುದ್ಧಿಯಿಂದ ಮಾಡುವ ದಾನವೇ ನಿಜವಾದ ದಾನ. ದಾನದ ಬಗ್ಗೆ ಮಕ್ಕಳಿಗೆ ಸರಿಯಾದ ಅರಿವು ನೀಡುವುದು ಅತ್ಯಗತ್ಯವಾಗಿದೆ. ದಾನ ನೀಡುವ, ಪಡೆಯುವ ವಿಷಯದಲ್ಲಿ ತಿಳುವಳಿಕೆ ಎಚ್ಚರಿಕೆಯನ್ನು ನೀಡುವುದು ಬಹು ಅವಶ್ಯಕವಾಗಿದೆ.

ದಾನವು ವ್ಯಕ್ತಿಯ ಅಥವಾ ವ್ಯಕ್ತಿಗಳ ಕೊರತೆಯನ್ನು ತುಂಬುವಂತಿರಬೇಕು. ಜೊತೆಗೆ ಸಮಾಜ, ದೇಶದ ಬಡವ-ಬಲ್ಲಿದರ ನಡುವೆ ಸಮತೂಕವನ್ನು ತರುವಂಥದ್ದಾಗಿಬೇಕು. ದಾನವು ಸ್ವಾರ್ಥ, ಅಹಂನಿಂದ ಕೂಡಿರದೆ ಒಂದು ಒಳ್ಳೆಯ ಉದ್ದೇಶದಿಂದ ಕೂಡಿರಬೇಕು. ಅತಿಯಾದ ದಾನವು ಜನತೆಯಲ್ಲಿ ಸೋಮಾರಿತನ ಪರಾವಲಂಬನೆ ಹೆಚ್ಚುವಂತೆ ಮಾಡಿ ವ್ಯಕ್ತಿಗೂ, ಸಮಾಜಕ್ಕೂ ಹಾಗೂ ದೇಶಕ್ಕೂ ಹಾನಿಯನ್ನುಂಟು ಮಾಡುತ್ತದೆ. ಆದುದರಿಂದ ದಾನದ ಮಹತ್ವವನ್ನು, ದಾನವನ್ನು ಸಮಯ, ಸಂದರ್ಭ ಅಗತ್ಯತೆಗೆ ತಕ್ಕಂತೆ ಮಾಡಿ ಜನರನ್ನು ಉದ್ಧರಿಸುವ ಕಾರ್ಯ ಮಾಡಬೇಕೆಂದು ಮಕ್ಕಳಿಗೆ ತಿಳಿಸಿ, ದಾನ ಮೌಲ್ಯವನ್ನು ರೂಢಿಸಿಕೊಳ್ಳಲು ಕಥೆಗಳು ಉತ್ತಮವಾದುದೆಂಬುದು **'ಕೃತಜ್ಞತೆ'** ಕಥೆಯಲ್ಲಿ ಮೂಡಿಬಂದಿರುವುದನ್ನು ಕಾಣಲಾಗಿದೆ.

**೮. ಕೃತಜ್ಞತೆ :** ಗಿರಧರ ಮತ್ತು ಗಾಯಿತ್ರಿ ಎಂಬ ದಂಪತಿಗಳು ಕಲ್ಲಹಳ್ಳಿ ಎಂಬಲ್ಲಿ ವಾಸವಾಗಿದ್ದು, ಗಿರಿಧರ ವೃತ್ತಿಯಿಂದ ಟೊಪ್ಪಿ ಹೊಲಿಯುವ ದರ್ಜಿಯಾಗಿದ್ದನು. ಮಾರುಕಟ್ಟೆಯಲ್ಲಿ ವಿವಿಧ ವಿನ್ಯಾಸದ ಹೊಸ ಟೊಪ್ಪಿಗಳು ಬಂದಿದ್ದರಿಂದ, ಆತನ ಟೊಪ್ಪಿಗೆ ಬೇಡಿಕೆ ಕಡಿಮೆಯಾಗಿ ಯಾರು ಕೊಳ್ಳುತ್ತಿರಲಿಲ್ಲ. ಹೀಗಾಗಿ ಆದಾಯವಿಲ್ಲದೆ, ಜೀವನ ನಡೆಸುವುದೇ ಕಷ್ಟವಾಗಿದ್ದಾಗ, ಗಾಯದ ಮೇಲೆ ಬರೆ ಹಾಕಿದಂತೆ ಯುಗಾದಿ ಹಬ್ಬ ಬಂದಿತು. ತಮ್ಮ ಹತ್ತಿರ ಹಬ್ಬ ಆಚರಿಸಲು ಬಿಡಿಗಾಸು ಇಲ್ಲದ್ದರಿಂದ ದುಃಖಿತಗೊಂಡ ಗಾಯತ್ರಿಯನ್ನು ಕಂಡು "ನಾನು ಚೆನ್ನಾದ ಮೂರು ಟೊಪ್ಪಿಗೆ ಹೊಲೆದು ದೂರದ ಊರಲ್ಲಿ ಮಾರಿಬರುತ್ತೇನೆ. ಬಂದ ಹಣದಿಂದ ಹಬ್ಬವನ್ನು ಮಾಡೋಣ" ಎಂದು ಗಿರಿಧರ ಸಮಾಧಾನ ಹೇಳಿ, ಪಕ್ಕದ ಊರಾದ ದೂರ್ವಾಸಪುರಕ್ಕೆ ಮಾರಲು ಹೋದನು. ಸಂತೆಯಲ್ಲಿ ತನ್ನ ಕ್ಷೀಣ ಸ್ವರದಲ್ಲಿ ಟೊಪ್ಪಿಗೆಯನ್ನು ಹೊಗಳಿ ಜನರಿಗೆ ಕರೆದರೂ ಯಾರೂ ಬಂದು ಇವನ ಟೊಪ್ಪಿಗೆ ಖರೀದಿಸಲಿಲ್ಲ. ಸಂಜೆಯಾಯಿತು.

ಸಪ್ಪೆ ಮುಖದಿಂದ ತನ್ನ ಹಳ್ಳಿಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ಒಂದು ಮಂಗ, ಹಸು, ಬೆದರು ಬೊಂಬೆ ಸರದಿಯಂತೆ ಚಳಿಯಿಂದ ನಡುಗುತ್ತಿದ್ದುದನ್ನು ಕಂಡು ಒಬ್ಬೊಬ್ಬರಿಗೆ ಒಂದೊಂದು ಟೊಪ್ಪಿಗೆ ನೀಡಿ ಚಳಿಯಿಂದ ರಕ್ಷಣೆ ಪಡೆಯುವಂತೆ ಹೇಳಿ ಹೊರಟನು. ಮನೆಗೆ ಬಂದಾಗ ಬರೀ ಕೈಯನ್ನು ಕಂಡು ಗಿರಿಧರನ ಹೆಂಡತಿ ಸಂತೋಷದಿಂದ ಟೊಪ್ಪಿಗೆ ಮಾರಾಟವಾಗಿದೆ ಎಂದು ಎಷ್ಟು ಹಣ ಬಂದಿದೆ ಎಂದು ಕೇಳಿದಾಗ, ಗಿರಿಧರ ಮಂಗ, ಹಸು, ಬೆದರು ಬೊಂಬೆಗೆ ದಾನ ಮಾಡಿದಾಗಿ ಹೇಳುವನು. ಇವನ ಸ್ವಭಾವ ಅರಿತ ಗಾಯಿತ್ರಿ 'ಇನ್ನು ಉಪವಾಸವೇ ಗತಿ. ಯುಗಾದಿ ದಿನ ನೀರು ಕುಡಿದು ಹಬ್ಬ ಮಾಡಬೇಕು" ಎಂದುಕೊಂಡು ಸುಮ್ಮನಾದಳು.

ಮರುದಿನ ಯಾರೋ ಬಾಗಿಲು ತಟ್ಟಿದಂತಾಗಿ ಹೊರಗೆ ಬಂದು ನೋಡಿದರೆ, 'ಒಂದು ಚೀಲ ಅಕ್ಕಿ, ಒಂದು ಕೊಡ ಹಾಲು, ಒಂದು ಬುಟ್ಟಿ ಹಣ್ಣು ಕಂಡವು'. ಅದರಿಂದ ಗಾಯತ್ರಿ ಬಗೆಬಗೆಯ ತಿಂಡಿ ಮಾಡಿ ಹಬ್ಬ ಆಚರಿಸಿ, ಬೀದಿ ಮಕ್ಕಳಿಗೆಲ್ಲ ದಾನ ಮಾಡಿದಳು. ತಮ್ಮ ದಾನ ಗುಣದಿಂದ ಬಡತನವಿದ್ದರೂ ಬೇಸರಪಡದೆ ಮಾರಲು ಹೋದ ಟೊಪ್ಪಿಗೆಯನ್ನು ಮರುದಿನ ಮಾರಬಹುದೆಂದು ಯೋಚಿಸದೆ, ಅಗತ್ಯಕ್ಕೆ ಸ್ಪಂಧಿಸಿ, ಟೊಪ್ಪಿಗೆಗಳನ್ನು ದಾನ ಮಾಡಿದುದಕ್ಕಾಗಿ ಪ್ರತಿಫಲವಾಗಿ ಗಿರಿಧರನ ಬಡತನ ದೂರವಾದುದಲ್ಲದೆ, ತನಗೆ ದೊರೆತ ಅಕ್ಕಿ, ಹಾಲು, ಹಣ್ಣನ್ನು ಎಲ್ಲರಿಗೂ ದಾನ ಮಾಡುತ್ತಾ ಮೂಕಪ್ರಾಣಿ ಮತ್ತು ಜೀವವಿಲ್ಲದ ಬೊಂಬೆಗಳಿಗೂ ಕೃತಜ್ಞತೆಯನ್ನು ಅರ್ಪಿಸುತ್ತಾ ಬಾಳಿದರು.

ಈವಂಗೆ ದೇವಂಗೆ I ಆವುದಂತರವಯ್ಯ I
ದೇವನುದ್ಯೋಗದಿಂ ಕೊಡುವ ಕೈಯಾರೆ I
ಈವನೇ ದೇವ ಸರ್ವಜ್ಞ

(ಸರ್ವಜ್ಞ ವಚನ ಸಂಪದ. ಮಾಗಡಿ ರಂಗನರಸಿಂಯ್ಯ. ವಿಜಯವಾಹಿನಿ ಪಬ್ಲಿಕೇಷನ್ಸ್ ಪು-೫೭)

ಎಂಬುದು ಈ ಕಥೆಗೆ ಅನ್ವಯವಾಗುವಂತಿದ್ದು, ದಾನ ಗುಣದ ಮಹತ್ವವನ್ನು ತಿಳಿಸುತ್ತಿದೆ. ದಾನದಲ್ಲಿ ಪಾಪ ಪರಿಹಾರವಾಗುತ್ತದೆ. ಇಲ್ಲದವರಿಗೆ ಇರುವವರು ನೀಡುವ ಮೂಲಕ ಮತ್ತೊಬ್ಬರ ಅಗತ್ಯವನ್ನು ಪೂರೈಸುವ ಆಶಯವಿರುವುದು ದಾನದಲ್ಲಿ ಮಾತ್ರ ಎಂಬುದು **ಕೃತಜ್ಞತೆ ಕಥೆಯಲ್ಲಿ** ವಿಶೇಷವಾಗಿ ಮೂಡಿ ಬಂದಿರುವುದಲ್ಲದೆ, ದಾನಕ್ಕೆ ಪೂರಕವಾಗಿ ಕೃತಜ್ಞತಾ ಮೌಲ್ಯವನ್ನು ತಿಳಿಸಿರುವ ಸಾಧ್ಯತೆಯನ್ನು ಗಮನಿಸಲಾಗಿದೆ.

****

## ಚಿಂತನಾಶೀಲತೆ



'ಚಿಂತನಾಶೀಲತೆ ಎಂಬುದು ಯೋಚನೆ, ಯೋಚನೆಗಳನ್ನು ಉತ್ಪಾದಿಸುವ ಕ್ರಿಯೆ ಅಥವಾ ಯೋಚನೆಗಳನ್ನು ಉತ್ಪಾದಿಸುವ ಪ್ರಕ್ರಿಯೆಯ ಪರಿಣಾಮವಾಗಿ ಆಗುವ ಕಲ್ಪನೆಗಳು'.

ಅಂದರೆ ಚಿಂತನೆಯು ಮಾನವನ ಅನೇಕ ಕ್ರಿಯೆಗಳ ಸಂವಹನಗಳ ಆಧಾರವಾಗಿದ್ದು, ಇತರರ ಒಳಿತಿಗಾಗಿ ಮಾಡುವ ನಿಸ್ವಾರ್ಥ ಸೇವೆಯಾಗಿದೆ. ಈ ಗುಣವನ್ನು ಮಕ್ಕಳಲ್ಲಿ ಮೌಲ್ಯವಾಗಿ ರೂಡಿಸಿಕೊಳ್ಳುವಂತೆ ಮಾಡವುದು, ದೇಶಕ್ಕೆ ಸತ್ಪ್ರಜೆಯನ್ನು ನೀಡುವಲ್ಲಿನ ನಮ್ಮ ಕೊಡುಗೆಯಾಗುವುದು. ಮಕ್ಕಳು ಸ್ವತಂತ್ರವಾಗಿ, ಮುಕ್ತವಾಗಿ ಆಲೋಚಿಸುವುದನ್ನು ಕಲಿತು ಪ್ರಜಾಪ್ರಭುತ್ವ ವ್ಯವಸ್ಥೆಯಿಂದ ಕೂಡಿದ ನಮ್ಮ ದೇಶದಲ್ಲಿ ಚಿಂತನಾಶೀಲರಾಗಬೇಕು. ಶಾಲೆ ಮತ್ತು ಮನೆ ಎರಡು ಕಡೆಯಲ್ಲಿಯೂ ಮಕ್ಕಳಲ್ಲಿ ಒಳ್ಳೆಯ ಗುಣಗಳ ಜೊತೆ ಮೌಲ್ಯಗಳನ್ನು ಬೆಳೆಸಿಕೊಳ್ಳುವಂತೆ ಮಾಡಬೇಕು. 'ತ್ಸುನಾಮಿ ಕಥೆ, ಮಂತ್ರಿಯ ಪರೀಕ್ಷೆ, ಹಿಮವಂತನ ಸಾಹಸಗಳು, ತೀರ್ಪು, ಮಾಯಾ

ಕನ್ನಡಿ, ಅದೃಷ್ಟ ದೇವತೆ, ಲಕ್ಷ್ಮಿ ಪ್ರಸಾದ ತ್ಸುನಾಮಿ ಕಥೆ, ಮಂತ್ರಿಯ ಪರೀಕ್ಷೆ, ಹಿಮವಂತನ ಸಾಹಸಗಳು, ತೀರ್ಪು, ಮಾಯಾ ಕನ್ನಡಿ, ಅದೃಷ್ಟ ದೇವತೆ, ಲಕ್ಷ್ಮಿ ಪ್ರಸಾದ ಮತ್ತು ದೇವಸ್ಥಾನ ಬೀಳುವವರೆಗೆ' ಮೊದಲಾದ ಕಥೆಗಳಲ್ಲಿ ಚಿಂತನಾಶೀಲ ಗುಣವು ಮೌಲ್ಯವಾಗಿ ಪರಿವರ್ತಿತಗೊಂಡಾಗ ಅದಕ್ಕೆ ಹೆಚ್ಚು ಮಾನ್ಯತೆ ದೊರೆತು, ಕಾರ್ಯಗಳು ಯಶಸ್ವಿಗೊಳ್ಳುವುದಲ್ಲದೆ, ತೊಂದರೆಯಿಂದ ಪಾರಾಗ ಬಹುದು ಎಂಬುದು ಸ್ಪಷ್ಟವಾಗಿ ಮೂಡಿಬಂದಿರುವುದನ್ನು ಕಾಣಲಾಗಿದ್ದು, **'ತ್ಸುನಾಮಿ' ಕಥೆಯ** ಪ್ರಸ್ತಾಪದೊಂದಿಗೆ ಮೌಲ್ಯವನ್ನು ಚರ್ಚಿಸಲಾಗಿದೆ.

**೯. ತ್ಸುನಾಮಿ ಕಥೆ:** ಹಿರಿಯ ಅನುಭವಸ್ಥ ಕೃಷ್ಣಪ್ಪ, ಯೌವನದಲ್ಲಿ ಕೂಲಿ ಕೆಲಸ ಮಾಡಿ, ಊರಿನ ಮಧ್ಯದ ಬೆಟ್ಟದ ಮೇಲೆ ಮನೆಯನ್ನು ಕಟ್ಟಿದ್ದ. ಮನೆಯಲ್ಲಿ ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳೊಂದಿಗೆ ವಾಸವಾಗಿದ್ದನು. ಒಮ್ಮೆ ಊರಿನ ಎಲ್ಲರೂ ಜಾತ್ರೆಗಾಗಿ ಹೊರಟಿದ್ದಾಗ, ಕೃಷ್ಣಪ್ಪನ ಮನೆಯವರೂ ಹೊರಟರು. ತನಗೆ ಓಡಾಡಲು ಶಕ್ತಿಯಿಲ್ಲವೆಂದು ಕೃಷ್ಣಪ್ಪ ಮನೆಯಲ್ಲೇ ಉಳಿದಾಗ, ಆತನ ಮರಿಮಗ ಗಿರಿಧರನು ಆತನ ಜೊತೆಯಲ್ಲೇ ಉಳಿದನು. ಕೃಷ್ಣಪ್ಪ ಎಂದಿನಂತೆ ಬೆಟ್ಟದ ಮೇಲೆ ನಿಂತು, ತನ್ನ ಯೌವನದ ಸಾಹಸ ಕಥೆಯನ್ನು ಮರಿ ಮಗನಿಗೆ ತಿಳಿಸುತ್ತಿದ್ದಾಗ ಸಮುದ್ರದ ಅಲೆಯಲ್ಲಿ ಆದ ಬದಲಾವಣೆಯನ್ನು ಗಮನಿಸಿ, ಮರಿಮಗನಿಂದ ಅದನ್ನು ಖಾತ್ರಿ ಪಡಿಸಿಕೊಂಡನು.

ತನಗೆ ಹಿರಿಯರು ಹೇಳಿದ್ದ ದೈತ್ಯ ಅಲೆಗಳ ಬಗ್ಗೆ ನೆನಪಿಸಿಕೊಂಡನು. ಮರಿಮಗನಿಗೆ "ಆ ಅಲೆಗಳು ಭೂಕಂಪನದಿಂದ ಆಗುವಂತಹದ್ದಾಗಿದ್ದು, ಊರಿಗೆ ಊರೇ ಅಲೆಗೆ ಗುರಿಯಾಗುತ್ತದೆಂದು" ಹೇಳುತ್ತಾ ಕೃಷ್ಣಪ್ಪ ತನ್ನ ಊರಿನ ಜನರನ್ನು ಆ ದೈತ್ಯ ಅಲೆಯಿಂದ ರಕ್ಷಿಸಲು ಯೋಚಿಸ ತೊಡಗಿದನು. ಬೆಟ್ಟದ ಮೇಲಿಂದ ಕರೆಯುವುದು, ಇಲ್ಲವೇ ಮರಿಮಗನನ್ನು ಕಳಿಸಿ ಸುದ್ದಿ ಮುಟ್ಟಿಸುವುದು ವ್ಯರ್ಥ ಕೆಲಸವೆಂದು ಯೋಚಿಸಿ, ಎಲ್ಲರ ಗಮನ ಸೆಳೆಯಲು ಬೆಟ್ಟದ ಮೇಲಿದ್ದ ತನ್ನ ಮನೆಗೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿದನು. ಇದ್ದನ್ನು ಗಮನಿಸಿದ ಊರಿನ ಜನರೆಲ್ಲ ಗಾಭರಿಯಿಂದ ಬೆಟ್ಟದ ಮೇಲೆ ಬಂದು ನೋಡಿದರೆ, ಕೃಷ್ಣಪ್ಪ ಮತ್ತು ಗಿರಿಧರ ಸುರಕ್ಷಿತವಾಗಿದ್ದರು. ಇದನ್ನು ಕಂಡು ಏಕೆ ಹೀಗೆ ಮಾಡಿದರೆಂದು ವಿಚಾರಿಸುತ್ತಿದ್ದಾಗ, ಕೃಷ್ಣಪ್ಪ ಅಲೆಗಳಿಂದ ಊರಿಗೆ ಊರೇ ನಾಶವಾಗಿರುವುದನ್ನು ತೋರಿಸುತ್ತಾ ಎಲ್ಲಾ ವಿಚಾರವನ್ನು ವಿವರವಾಗಿ ಹೇಳಿದನು. ಹೀಗೆ **ಕೃಷ್ಣಪ್ಪನ ಚಿಂತನಾಶೀಲಗುಣದಿಂದಾಗಿ** ಊರಿನ ಜನರೆಲ್ಲ ಬದುಕುವಂತಾಯಿತು. ಇಲ್ಲವಾದರೆ ಆತ ಸುಮ್ಮನೆ ಸಾಮಾನ್ಯ ಅಲೆಗಳೆಂದು ಇದ್ದಿದ್ದರೆ, ಊರಿನ ಜೊತೆ ಸಾವಿರಾರು ಜನ ತಮ್ಮ ಪ್ರಾಣವನ್ನು ಕಳೆದುಕೊಳ್ಳಬೇಕಾಗಿತ್ತು.

ಚಿಂತನೆಯು ಇತರರಿಗೆ ಸಹಾಯ ಮಾಡುವುದಕ್ಕೆ ಪ್ರೇರಣೆ ನೀಡುತ್ತದೆ. ಅಲ್ಲದೆ ಯಾವುದೇ ಪ್ರತಿಫಲಾಪೇಕ್ಷೆ ಬಯಸದೆ ಇತರರಿಗೆ ಒಳಿತನ್ನು ಮಾಡುವುದನ್ನು ಇಚ್ಛಿಸುತ್ತದೆ. ಚಿಂತನೆಯಿಂದ ಕೂಡಿದ ಸಹಾಯವು ಒಬ್ಬ ನಿರ್ದಿಷ್ಟ ವ್ಯಕ್ತಿ, ಸಂಸ್ಥೆ ಹೊಂದಿರುವ ಒಂದು ಕರ್ತವ್ಯವಾಗಿದ್ದು ಒಂದು ನೈತಿಕ ಜವಾಬ್ದಾರಿಯಾಗಿರುತ್ತದೆ. ಇದರಿಂದ ತಾವು ಬೆಳೆಯುವುದರ ಜೊತೆಗೆ ನಮ್ಮ ಸಂಸ್ಥೆಯು ಬೆಳೆಯಲು ಸಹಕರಿಸಿ, ದೇಶದ ಬೆಳವಣಿಗೆಗೆ ಪ್ರೇರಕ ಹಾಗೂ ಪೂರಕವಾಗಿ ಕೊಡುಗೆ ನೀಡಿದಂತಾಗುತ್ತದೆ. **ಡಾ.ಎ.ಪಿ.ಜೆ.ಅಬ್ದುಲ್ ಕಲಾಂ** ರವರ ಆತ್ಮಕಥೆಯಾದ The wings of fire ನಲ್ಲಿನ ಒಂದು ಸನ್ನಿವೇಶವನ್ನು ಚಿಂತನಾಶೀಲ ಮೌಲ್ಯಕ್ಕೆ ಅತ್ಯುತ್ತಮ ಉದಾರಣೆಯಾಗಿ ನೀಡಬಹುದು. ಆಗಿನ ದೇಶದ ಪ್ರಧಾನಿಯಾದ ಅಟಲ ಬಿಹಾರಿ ವಾಜಪೇಯಿಯವರು ಡಾ.ಅಬ್ದುಲ್ ಕಲಾಂ ರವರನ್ನು ರಾಷ್ಟ್ರಪತಿಯಾಗಲು ಆಹ್ವಾನಿಸಲು ಹೋದಾಗ, "ತಮಗೆ ೧೫ ನಿಮಿಷಗಳ ಸಮಯವನ್ನು ನೀಡುತ್ತೇನೆ. ತಾವು ಏನು ಹೇಳಬೇಕು ಅದನ್ನು ಹೇಳಿ ಹೋಗಬೇಕು. ನನಗೆ ನನ್ನ ಪ್ರಯೋಗಾಲಯದಲ್ಲಿ ದೇಶಕ್ಕಾಗಿ ಮಾಡುವುದು ಬಹಳಷ್ಟಿದೆ". ಎಂದು ಹೇಳಿ ಅದರಂತೆ ತಮ್ಮ ಮಾತುಕತೆಯನ್ನು ಮುಗಿಸಿ ತಮ್ಮ ಕಾರ್ಯದಲ್ಲಿ ತೊಡಗಿದರಂತೆ. ಅಂದರೆ ಅವರ ಚಿಂತನಾಶೀಲತೆಯು ದೇಶದ ಪ್ರಗತಿ ಕಾರ್ಯದಲ್ಲಿ ತೊಡಗಿತ್ತು ಎಂಬುದು ಇದರಿಂದ ತಿಳಿದು ಬರುತ್ತದೆ. ಹೀಗಾಗಿ ಚಿಂತನಾಶೀಲರಾಗಿ ಸಮಯ ಸಂದರ್ಭಕ್ಕೆ ತಕ್ಕಂತೆ ಸರಿಯಾದ ಯೋಚನೆಯಿಂದ ಕಾರ್ಯಗತಗೊಂಡಾಗ ಬರುವ ಆಪತ್ತಿನಿಂದ ತಮ್ಮನ್ನು, ತಮ್ಮ ಕುಟುಂಬ, ಸಮಾಜ, ದೇಶವನ್ನು ರಕ್ಷಿಸಬಹುದು ಎಂಬ ಸಂದೇಶವು ಕಥೆಯಲ್ಲಿ ಗೋಚರಿಸಲ್ಪಟ್ಟಿದೆ.

****

# ಉನ್ನತ ಮೌಲ್ಯಗಳು

ಸಾಮಾನ್ಯ ಹಾಗೂ ಪರಿವರ್ತಿತ ಮೌಲ್ಯಗಳ ಮುಂದಿನ ಹಂತವೇ ಉನ್ನತ ಮೌಲ್ಯಗಳು. ಉನ್ನತ ಮೌಲ್ಯಗಳು ಪ್ರಾರಂಭದಲ್ಲಿ ಗುಣಗಳಂತೆ ಗೋಚರಿಸಲ್ಪಟ್ಟು, ಹಂತ ಹಂತವಾಗಿ ತನ್ನ ವಿಶೇಷತೆ, ಪ್ರಾಮುಖ್ಯತೆಯಿಂದಾಗಿ ಮೇಲಕ್ಕೆ ಏರುತ್ತಾ ಉನ್ನತ ಮೌಲ್ಯಗಳಾಗಿ ರೂಪ ಪಡೆಯುತ್ತವೆ. **ಹೆಚ್.ಹೆಚ್.ಹಾರ್ನ್** ಎಂಬ ಶ್ರೇಷ್ಠ ತತ್ವಶಾಸ್ತ್ರಜ್ಞ ತಿಳಿಸಿರುವಂತೆ, "ಯಾವುದೇ ಮನುಷ್ಯ ತಾನು ಅಂದು ಕೊಂಡ ಹಾಗೆಲ್ಲ ಆಗಲು ಸಾಧ್ಯವಿಲ್ಲ. ಅವನ ಉದ್ದೇಶಗಳು ಅವನ ಜೀವನದ ಜೊತೆಯಲ್ಲೇ ಅಂತ್ಯವಾಗುವುದಿಲ್ಲ. ಅಥವಾ ಆತ ಕಳೆದುಹೋದ ಲೋಕದಲ್ಲಿ ಬದುಕಲಾರ. ವಯಸ್ಸು ಕಳೆಯುವುದಿಲ್ಲ. ಆಚಾರ ಸಂಪ್ರದಾಯಗಳು ತಿಳಿಯುವುದಿಲ್ಲ. ತತ್ವಜ್ಞಾನಿಗಳ ಸತ್ಯದ ಪ್ರೇಮ, ಕಲಾಕಾರನ ಸೌಂದರ್ಯದ ಪ್ರೇಮ, ಒಬ್ಬ ಸಾಧುವಿನ ಪಾವಿತ್ರ್ಯತೆಯ ಪ್ರೇಮ ಮೊದಲಾದವುಗಳನ್ನು ತಿಳಿಯಲು, ಮಾಡಲು, ಪ್ರೀತಿಸಲು, ಸಾಧಿಸಲು ಉತ್ತಮವಾದ ಮನುಷ್ಯ ತನ್ನನ್ನು ತಾನು, ತನ್ನ ಸಾಮರ್ಥ್ಯವನ್ನು ಜ್ಞಾನದಾಹವನ್ನು ಮಿತಿಗೊಳಿಸುವುದಿಲ್ಲ. ಇವುಗಳನ್ನು ಅನುಭವಿಸಲು ಆನಂದಿಸಲು, ಸಾಧಿಸಲು ತನ್ನ ಜೀವನ ಪರ್ಯಂತ ಪ್ರಯತ್ನಿಸುತ್ತಾ ಇರುತ್ತಾನೆ. ಅಮರತ್ವವು ಆದರ್ಶವಾದದ ಉನ್ನತ ಮೌಲ್ಯ. ಮನುಷ್ಯನಿಗೆ ಅಸ್ತಿತ್ವದೊಂದಿಗೆ ಇದು ಅರ್ಥಗರ್ಭಿತವಾದ ಅಗತ್ಯ".



ದೇಶಭಕ್ತಿ, ಪ್ರೀತಿ, ಸಹನೆ, ತ್ಯಾಗ, ಸತ್ಯ ಮೊದಲಾದ ಮೌಲ್ಯಗಳು ಆದರ್ಶಯುತವಾಗಿದ್ದು, ಈ ಮೌಲ್ಯಗಳ ನೆರಳಲ್ಲಿ ಇತರ ಮೌಲ್ಯಗಳು ಯಶಸ್ವಿ ಕಾರ್ಯಗತಗೊಳ್ಳುತ್ತವೆ ಎಂದು ಅರ್ಥೈಸಿಕೊಳ್ಳಲಾಗಿದೆ.

****

## ಪ್ರೀತಿ




'ಯಾವುದೇ ವ್ಯಕ್ತಿ ಅಥವಾ ವಸ್ತುವಿನ ಬಗ್ಗೆ ವಿಶ್ವಾಸ ಪ್ರಕಟಣೆಯೇ ಪ್ರೀತಿ'. 'ಯಾವುದೇ ಕಾರಣಕ್ಕೆ ಯಾರಲ್ಲಿಯೂ ದ್ವೇಷ ಪ್ರಕಟಿಸದೇ ಸಂಯಮ ಸಹಿಷ್ಣುತೆಗಳಿಂದ ಇರುವುದು, ಹಿತೈಷಿಗಳ ಬಗ್ಗೆ, ಆತ್ಮೀಯರ ಬಗ್ಗೆ ವಿಶ್ವದ ಎಲ್ಲ ಸೃಷ್ಟಿಯ ಬಗ್ಗೆ ಮಮತೆ ತೋರುವುದೇ ಪ್ರೀತಿ'.

ಪ್ರೀತಿಯು ಆತ್ಮದಿಂದ ಉಂಟಾಗಬೇಕೇ ಹೊರತು ಸ್ವಾರ್ಥದಿಂದಲ್ಲ. ಪ್ರೀತಿಯಿಂದ ಸಂಬಂಧವನ್ನು ಒಂದುಗೂಡಿಸಬಹುದು. ಇಲ್ಲವೇ ಬೇರ್ಪಡಿಸಬಹುದು. ಪ್ರೀತಿ-ಪ್ರೇಮದಿಂದ ವಂಚಿತವಾದ ಜೀವನ ನಿಷ್ಪ್ರಯೋಜಕ ಎಂದು ಹೇಳಲಾಗಿದೆ. ಪ್ರೀತಿ ಎಂಬುದು ಜನ-ತನು-ಮನ-ಧನಗಳನ್ನು ಆಕರ್ಷಿಸುತ್ತದೆ. ದ್ವೇಷದಿಂದ ಸಾಧಿಸಲಾಗದ್ದನ್ನು ಪ್ರೀತಿಯಿಂದ ಸಾಧಿಸಿಕೊಳ್ಳಬಹುದು. ಪ್ರತಿ ಮಾನವನ, ವಸ್ತುವಿನ ಸಂಪರ್ಕ ಸಾಧನವೇ ಪ್ರೀತಿಯಾಗಿದೆ. ಪ್ರೀತಿ ಪದದ ವ್ಯಾಪ್ತಿ ಪ್ರಾಣಿ, ವ್ಯಕ್ತಿಗಳಲ್ಲಿ ಸ್ವರೂಪ, ಸಂಬಂಧಗಳ ಆಧಾರದಲ್ಲಿ ವೈವಿಧ್ಯತೆಯಿಂದ ಕೂಡಿದ್ದು, **'ಪ್ರೀತಿ'** ಎಂಬ ಕಥೆಯಲ್ಲಿ ಸಹೋದರ ಪ್ರೀತಿಯ ಚಿತ್ರಣವನ್ನು ಕಾಣಬಹುದು.

**೧. ಪ್ರೀತಿ:** ಹಿರಿಯೂರಿನಲ್ಲಿ ರಾಮ, ಲಕ್ಷ್ಮಣ ಎಂಬಿಬ್ಬರು ಅಣ್ಣ ತಮ್ಮಂದಿರು ವಾಸವಾಗಿದ್ದರು. ಅವರು ರೈತರಾಗಿದ್ದು, ಕಷ್ಟ ಜೀವಿಗಳಾಗಿದ್ದರು. ಹೆಸರಿಗೆ ತಕ್ಕಂತೆ ರಾಮ, ಲಕ್ಷ್ಮಣರಂತೆ ಅನ್ಯೋನ್ಯವಾಗಿದ್ದರು. ಆದರೆ ಅವರ ಹೆಂಡತಿಯರಾದ ಗೌರಿ

ಉಮಾರಿಗೆ ಒಬ್ಬರನ್ನೊಬ್ಬರಿಗೆ ಕಂಡರೆ ಆಗುತ್ತಿರಲಿಲ್ಲ. ಹೀಗಾಗಿ ಅವರಿಬ್ಬರು ಹೊಲ ಮನೆಯನ್ನು ಪಾಲು ಮಾಡಿಕೊಂಡರು. ಆದರೆ ಹೊಲವನ್ನು ಇಬ್ಬರೂ ಒಟ್ಟಿಗೆ ಊಳುತ್ತಿದ್ದರು. ಕಣ ಮಾಡುತ್ತಿದ್ದರು. ಒಮ್ಮೆ ಬೆಳೆ ಚೆನ್ನಾಗಿ ಬರಲಿಲ್ಲವಾದ್ದರಿಂದ ಇಬ್ಬರು ತಮ್ಮ ಪಾಲಿನ ಕಾಳನ್ನು ಒಂದು ಕಡೆ ರಾಶಿ ಮಾಡಿದರು. ಅಣ್ಣನಿಗೆ ಗೊತ್ತಿಲ್ಲದಂತೆ "ಪಾಪ, ಅಣ್ಣನಿಗೆ ವಯಸ್ಸಾಗುತ್ತಿದೆ. ಮಕ್ಕಳಿಲ್ಲ ವೃದ್ಧಾಪ್ಯದಲ್ಲಿ ಯಾರು ನೋಡಿಕೊಳ್ಳುತ್ತಾರೆ?" ಎಂದು ತನ್ನ ಧಾನ್ಯದ ರಾಶಿಯಿಂದ ಸ್ವಲ್ಪ ತೆಗೆದು ಅಣ್ಣನ ರಾಶಿಗೆ ಹಾಕಿ ತಮ್ಮನು ಸುಮ್ಮನಾದನು. ಅದೇ ರೀತಿ ಅಣ್ಣನು ತಮ್ಮನಿಗೆ ಗೊತ್ತಾಗದಂತೆ "ಲಕ್ಷ್ಮಣ ಮಕ್ಕಳೊಂದಿಗ. ಬೆಳೆಯುವ ಮಕ್ಕಳು ಖರ್ಚು ಹೆಚ್ಚು ಬೆಳೆ ಬೇರೆ ಚೆನ್ನಾಗಿ ಬರಲಿಲ್ಲ" ಎಂದು ಸ್ವಲ್ಪ ಧಾನ್ಯ ತೆಗೆದು ಹಾಕಿದನು.

ಹೀಗೆ ಅಣ್ಣ – ತಮ್ಮನ ಪ್ರೀತಿಯಿಂದಾಗಿ ಇಬ್ಬರೂ ಮತ್ತೊಬ್ಬರ ವಿಚಾರವನ್ನು ಯೋಚಿಸಿ, ಚಿಂತಿಸಿ ಮತ್ತೊಬ್ಬರಿಗೆ ಗೊತ್ತಾಗದಂತೆ ಸಹಕರಿಸಿದರು. ಆದಾಗ್ಯೂ ಪ್ರೀತಿ–ಪ್ರೇಮವನ್ನು ಮಕ್ಕಳಲ್ಲಿ ಚಿಕ್ಕಂದಿನಿಂದಲೇ ಬೆಳೆಯುವಂತೆ ಮಾಡಿದಾಗ ಸಹೋದರರು ದಾಯಾದಿಗಳಾಗುವುದು ತಪ್ಪಿ, ಮಾದರಿಯಾಗಿ ಮತ್ತೊಬ್ಬರು ಅವರನ್ನು ಅನುಸರಿಸುವಂತಾಗುತ್ತದೆ. ಅಲ್ಲದೆ ಇಂತ ಕಥೆಯಿಂದ ಮಕ್ಕಳಿಗೆ ಭ್ರಾತೃ ಪ್ರೀತಿಯನ್ನು ಅದರ ಮಹತ್ವದ ಅರಿವನ್ನು ಮಾಡಿಸುವುದರ ಮೂಲಕ ಇತರ ಬಗೆಗಿನ ನಿಸ್ವಾರ್ಥ ಪ್ರೀತಿಯ ಬಗ್ಗೆ ತಿಳಿಸಬೇಕು. ಹಿತೈಷಿಗಳಿಗೆ, ಯಾವುದೇ ಜನರಿಗೆ ಪವಿತ್ರ ಪ್ರೇಮದ ಅಥವಾ ಪ್ರೀತಿಯ ಹಿನ್ನೆಲೆಯಲ್ಲಿ ಉತ್ತಮ ಆದರ್ಶಗಳೊಂದಿಗೆ ಸೇವೆ ಮಾಡಲು ಉತ್ತೇಜಿಸಲು ಕಥೆಗಳು ಬಹುಪಯೋಗಿ.

ಗಾಂಧೀಜಿಯವರ ಅಭಿಪ್ರಾಯದಂತೆ 'ದೇವರೇ ಪ್ರೀತಿ, ಪ್ರೀತಿಯೇ ದೇವರು'(god is love, love is god) ಎಂಬುದೆ ಪ್ರೀತಿಯ ಸ್ವರೂಪವಾಗಿದೆ. ಇವರು ಪ್ರತಿ ಮಾನವರಲ್ಲಿ ಪ್ರೀತಿ, ಸಹಾನುಭೂತಿ, ಅನುಕಂಪ ಮೌಲ್ಯದ ವೃದ್ಧಿಗೆ ಒತ್ತಾಯಿಸಿದರು. ಪ್ರೀತಿ ಆತ್ಮನಿಂದ ಆತ್ಮಕ್ಕಾಗಿ ಆಗಬೇಕೇ ಹೊರತು, ಸ್ವಾರ್ಥಕ್ಕಾಗಿ ಅಲ್ಲದೆ, ಪ್ರಾಪಂಚಿಕ ವ್ಯವಹಾರಕ್ಕಾಗಿ ಏರ್ಪಡಬೇಕು. ಒಬ್ಬನನ್ನು ಒಂದುಗೂಡಿಸಲು, ಇಲ್ಲವೇ ಬೇರ್ಪಡಿಸಲು ಪ್ರೀತಿಯಿಂದ ಮಾತ್ರ ಸಾಧ್ಯ. ಪ್ರೀತಿ ವಂಚಿತ ಜೀವನ ನಿಷ್ಪ್ರಯೋಜಕ. ದ್ವೇಷದಿಂದ ಸಾಧಿಸಲಾಗದ್ದನ್ನು ಪ್ರೀತಿಯಿಂದ ಸಾಧಿಸಿರುವುದನ್ನು ಬಹಳಷ್ಟು ಐತಿಹಾಸಿಕ ಘಟನೆ, ಸನ್ನಿವೇಷಗಳಲ್ಲಿ ಕಾಣಲಾಗಿದೆ. ಆದುದರಿಂದ ಅಧ್ಯಾಪಕರು, ಪೋಷಕರು ಸಮಯೋಚಿತವಾಗಿ ಮಕ್ಕಳಿಗೆ ಪ್ರೀತಿಯ ಮಹತ್ವವನ್ನು ನೀತಿಕಥೆಗಳ ಮೂಲಕ, ಘಟನೆಗಳ, ಪ್ರಚಲಿತ ಸಮಸ್ಯೆಗಳ ಮೂಲಕ ಪ್ರೀತಿಯಿಂದ ಪಡೆಯಬಹುದಾದ ಸೌಖ್ಯ ಅಭಿವೃದ್ಧಿ, ಶಾಂತಿ ಸ್ಥಾಪನೆಯ ಫಲಗಳನ್ನು ತಿಳಿಸಬೇಕು. ದ್ವೇಷದಿಂದಾಗುವ ಪ್ರಾಣಹಾನಿ,

ಅರ್ಥಹಾನಿ, ಅನಾಹುತಗಳನ್ನು ಮನದಟ್ಟು ಮಾಡಬೇಕು. ದ್ವೇಷದಿಂದಾಗದ ಕೆಲಸವನ್ನು ಪ್ರೀತಿಯಿಂದ ಸಾಧಿಸಬಹುದು ಎಂಬುದನ್ನು ತಿಳಿಸುವಲ್ಲಿ ಕಥೆಗಳ ಪಾತ್ರ ಶ್ರೇಷ್ಠವಾದುದೆಂದು ಕಥೆಗಳ ಸಂಶೋಧನೆಯಲ್ಲಿ ಅನ್ವೇಷಿಸಲಾಗಿದೆ

****

## ಸಹನೆ



ಗ್ರಹಗತಿಯ ತಿದ್ದುವನೆ ಜೋಯಿಸನು ಜಾತಕದಿ? I
ವಿಹಿತವಾಗಿಹುದದರ ಗತಿ ಸೃಷ್ಟಿವಿಧಿಯಿಂ I I
ಸಹಿಸಿದಲ್ಲದೆ ಮುಗಿಯದಾವ ದಶೆ ಬಂದೊಡಂ I
ಸಹನೆ ವಜ್ರದ ಕವಚ – ಮಂಕುತಿಮ್ಮ. I I

(ಡಿ.ವಿ.ಜಿ ಅವರ ಮಂಕುತಿಮ್ಮನ ಕಗ್ಗ–ವಿದ್ಯಾವಾಚಸ್ಪತಿ ಕವಿತಾಕೃಷ್ಣ, ತನು–ಮನು ಪ್ರಕಾಶನ.೨೦೦೩. ಪು–೪೯)

ಜೋಯಿಸನು ಜಾತಕದ ಗ್ರಹಗತಿ ತಿದ್ದಲಾರನು. ವಿಧಿಯಿಂದ ಸೃಷ್ಟಿಗತಿಯ ವಿಹಿತವಾಗಿಯೆ ಇರುವುದು. ಆವುದು ಬಂದರೂ ಸಹಿಸಿ ಅನುಭವಿಸಲೇ ಬೇಕು. ಸಹನೆಯೇ ವಜ್ರದ ಕವಚ

ಎಂಬ ಕವಿಯ ವಾಣಿಯಂತೆ ಯಶಸ್ವಿ ಜೀವನದಲ್ಲಿ ಸಹನೆಯ ಪಾತ್ರ ಹಿರಿದಾದುದಾಗಿದೆ. ಸಾಧನೆಯ ಹಾದಿಯಲ್ಲಿ ಸಹನೆಯು ಸ್ನೇಹಿತನಿದ್ದಂತೆ. ಹಿಂದೆಲ್ಲ ಸಾಧನೆಯ ಹಾದಿಯನ್ನು ಅರಸಿ ಬಂದ ಶಿಷ್ಯರಿಗೆ ಗುರುವು ಇಲ್ಲಸಲ್ಲದ ಪರೀಕ್ಷೆಗಳನ್ನು ಒಡ್ಡಿ ಕಾಡಿಸಿ ಪೀಡಿಸಿ ಅವರ ಸಹನೆಯನ್ನು ಪರೀಕ್ಷಿಸುತ್ತಿದ್ದದು, ಬಹಳಷ್ಟು ಕಥೆಗಳಿಂದ ತಿಳಿದುಬಂದಿದೆ. ಎಲ್ಲಾ ರೀತಿಯ ಪರೀಕ್ಷೆ ನೋವು ಸಂಕಟಗಳನ್ನು ಮೀರಿ ಸಹನೆಯಿಂದ

ಧೃಡ ಮನಸ್ಸಿನಿಂದ ನಿಂತವನಿಗೆ ಮಾತ್ರ ಜ್ಞಾನ ಭಿಕ್ಷೆ ದೊರೆಯುತ್ತಿತ್ತು. ಸಹನೆ ಎಂಬುದು ನಿಸ್ವಾರ್ಥ ಸೇವಕನಿದ್ದಂತೆ. ಅವನನ್ನು ಸಮಯ ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿಕೊಂಡಾಗ, ಅವನು **ಕೊಳ್ಳುವುದು ಕಡಿಮೆ. ಆದರೆ ಕೊಡುವುದು ಅಪಾರ.** ಉದಾಹರಣೆಗೆ : ವೃತ್ತಿ ಶಿಕ್ಷಣ ತರಬೇತಿಗೆಂದು ಸೇರಿದ ಶಿಕ್ಷಣಾರ್ಥಿಗಳು ಶಿಕ್ಷಕರು ಬೋಧನೆಯನ್ನು ಸಹನೆಯಿಂದ ಕೇಳಿ, ಅವರು ನಿಯೋಜಿಸುವ ಕಾರ್ಯವನ್ನು ಮಾಡಿದಾಗ ಮಾತ್ರ ತಮಗೆ ಸಂಬಂದಿಸಿದ ವೃತ್ತಿಯಲ್ಲಿ ನಿಪುಣರಾಗಿ ಸಮಾಜದಲ್ಲಿ ಒಂದು ಉನ್ನತ ಸ್ಥಾನವನ್ನು ಪಡೆಯುತ್ತಾರೆ.

ಹಾಗೆಯೇ ಸಾಧಕರಾದ ಹೆಲನ್ ಕೆಲರ್, ಧೀರೂಬಾಯಿ ಅಂಬಾನಿ, ಅಮಿತಾಬ್ ಬಚ್ಚನ್, ಡಾ. ರಾಜ್ ಕುಮಾರ್, ಡಾ.ಎ.ಪಿ.ಜೆ.ಅಬ್ದುಲ್ ಕಲಾಂ ಮೊದಲಾದವರು ತಮ್ಮ ತಮ್ಮ ಕ್ಷೇತ್ರದಲ್ಲಿ ಅನೇಕ ಕಷ್ಟಗಳನ್ನು ಎದುರಿಸಿ, ಅನುಭವಿಸಿ ತಮ್ಮ ಗುರಿಯನ್ನು ಮುಟ್ಟಿದರು. ಇವರೆಲ್ಲರಿಗೂ ಸಹಕಾರಿಯಾದುದು ಅವರ ಸಹನೆಯ ಮೌಲ್ಯವೇ. ಅದುದರಿಂದಲೇ ನಮ್ಮ ಹಿರಿಯರು ಹೇಳಿರುವುದು "ತಾಳಿದವನು ಬಾಳಿಯಾನು" ಎಂದು. ಸಹನೆ ಎಂದರೆ 'ಸುಮ್ಮನಿರುವುದಲ್ಲ. ಸುಮ್ಮನಿರಲಾಗದ ಅತೀವ ಒತ್ತಡದಲ್ಲಿಯೂ ಸಹನೆ ಕಳೆದುಕೊಳ್ಳದಿರುವುದು'. ಅಂದರೆ ಚೆನ್ನಾಗಿ ನೀರು ಕುಡಿದ ಮೇಲೆ ನಿರ್ಜಲ ಉಪವಾಸ ಮಾಡುವುದಲ್ಲ. ಬದಲಿಗೆ ಬಹಳ ಬಾಯಾರಿದಾಗಲೂ ನಾಲ್ಕು ತಾಸು ಉಪವಾಸವಿರುವುದು. ಗುರಿ ತಲುಪಿದ ಕ್ಷಣವೇ ನಾನು ಸಹನೆಯನ್ನು ಗೆದ್ದೆ ಎಂದು ಕೊಳ್ಳುವುದಲ್ಲ. ಸಹನೆಯ ಮೂಲಕವೇ ಜೀವನವನ್ನು ಸುಧಾರಿಸಿಕೊಂಡು ಸಾಧನೆಯ ಶೃಂಗವೇರಿ ನಿಂತು ಸಮತೋಲನವನ್ನು ಕಾಪಾಡುವುದು.

ಒಟ್ಟಾರೆಯಾಗಿ ಜೀವನದಲ್ಲಿ ಸಾಧನೆಯ ಮಹೋನ್ನತ ಶಿಖರವನ್ನು ಮುಟ್ಟುವಲ್ಲಿ ಸಹನೆಯ ಪಾತ್ರ ಹಿರಿದಾದುದಾಗಿದ್ದು, ಜೀವನದಲ್ಲಿ ಸಹನೆಯನ್ನು ಅನುಸರಿಸುವಾಗ ತುಂಬಾ ಕಷ್ಟ. ಆದರೆ ಅದನ್ನು ಸಹಿಸಿಕೊಂಡು ಯಾರು ಬದುಕು ನಡೆಸುತ್ತಾರೋ ಅವರೇ ನಿಜವಾದ ವಿಜಯಿಗಳಾಗುತ್ತಾರೆ ಎಂಬುದು ಕಥೆಗಳಾದ 'ಹಿತವಚನ'ದಲ್ಲಿ ಮನಸ್ಸಿಗೆ ನಾಟುವಂತೆ ಚಿತ್ರಿಸಿದ್ದು, ಮಕ್ಕಳಲ್ಲಿ ಸಹನೆಯನ್ನು ಬೆಳೆಸುವಲ್ಲಿ ಸಹಕಾರಿ.

**೨. ಹಿತವಚನ :** ವತ್ಸಲ ದೇಶದ ರಾಜನು ಬೇಟೆಗೆಂದು ಹೋದಾಗ, ಪಾಳುಬಾವಿಯಲ್ಲಿ ಬಿದ್ದಿದ್ದ ಸನ್ಯಾಸಿಯನ್ನು **ಕನಿಕರದಿಂದ** ಕಾಪಾಡಿದನು. ಸನ್ಯಾಸಿಯು ಹೊರಬಂದು **ಕೃತಜ್ಞತೆಯಿಂದ** ರಾಜನಿಗೆ ಆಶೀರ್ವಾದ ಮಾಡಿ ಮೂರು ಬುದ್ದಿ ಮಾತುಗಳನ್ನು

ಹೇಳುತ್ತಾನೆ. ರಾಜನಿಗೆ ಅವು ಸಾಮಾನ್ಯ ಮಾತುಗಳೆನಿಸಿದವು. ಆದರೂ ರಾಜ **ಸಹನೆಯಿಂದ** ಅವನ ಮಾತುಗಳನ್ನು ಆಲಿಸಿದ. ರಾಜ ಊರಿಗೆ ಬರುವಷ್ಟರಲ್ಲಿ ಪಕ್ಕದ ರಾಜ್ಯದ ರಾಯಭಾರಿ ಬರುತ್ತಿದ್ದಾನೆ ಎನ್ನುವ ಸುದ್ದಿ ಬಂದಿತು. ಅದರೊಂದಿಗೆ ರಾಯಭಾರಿ ರಾಜನ ಗುಣ, ಅವಗುಣಗಳನ್ನು ನೋಡಿ, ಅಳೆದು ತನ್ನ ಅರಸನಿಗೆ ತಿಳಿಸುತ್ತಾನೆ ಎನ್ನುವ ವದಂತಿಯೂ ಬಂದವು.

ತಕ್ಷಣ ರಾಜನಿಗೆ ಸನ್ಯಾಸಿಯ ಮೊದಲ ಮಾತು "ಅರಸ ಜಾಗರೂಕನಾಗಿರಬೇಕು" ಎಂಬುದು ನೆನಪಾಗಿ, ತುಂಬಾ ಜಾಗರೂಕತೆಯಿಂದ ರಾಯಭಾರಿಯನ್ನು ಸ್ವಾಗತಿಸಿದ. ಅವನನ್ನು ಒಂದು ಕೋಣೆಯಲ್ಲಿ ತಂಗಲು ಹೇಳಿ, ಕೋಣೆಯೊಳಗಿಂದ ಮಾತುಗಳು ತನಗೆ ಕೇಳಿಸುವಂತೆ ವ್ಯವಸ್ಥೆ ಮಾಡಿದ್ದನು. ರಾಯಭಾರಿಯನ್ನು ಹೇಗೆ ನಡೆಸಿಕೊಳ್ಳಬೇಕು? ಎಂದು ಯೋಚನೆಯಾದಾಗ, ರಾಜನಿಗೆ ಸನ್ಯಾಸಿಯ ಎರಡನೆಯ ಮಾತು "ಶತೃಗಳನ್ನು ಗೌರವಿಸಬೇಕು" ಎಂಬುದು ನೆನಪಾಗಿ, ಆರೋಗ್ಯ ಕೆಟ್ಟ ರಾಯಭಾರಿಯನ್ನು ಕೊಲ್ಲಿಸದೆ, ಉಪಚರಿಸಿ ಗುಣಪಡಿಸಿದ.

ಮರುದಿನ ರಾಜ ಕಿಟಕಿಯಿಂದ ರಾಯಭಾರಿ ತನ್ನ ಮಂತ್ರಿಯೊಡನೆ ಗುಟ್ಟಾಗಿ ಮಾತನಾಡುವುದನ್ನು ನೋಡಿ, "ಏನು ನನ್ನ ಮಂತ್ರಿ ರಾಯಭಾರಿಯೊಂದಿಗೆ ಗುಟ್ಟಾಗಿ ಮಾತನಾಡುತ್ತಿದ್ದಾನಲ್ಲಾ" ಎಂದು ಸಿಟ್ಟಿನಿಂದ ಕತ್ತಿಯನ್ನು ಎತ್ತಿದ. ತಕ್ಷಣ ಆತನಿಗೆ ಸನ್ಯಾಸಿಯ ಕೊನೆಯ ಮಾತು "ಯಾವುದೇ ಕೆಲಸವನ್ನು ಮಾಡುವಾಗ ಎರಡು ಬಾರಿ ಆಲೋಚಿಸಬೇಕು" ಎಂಬುದು ನೆನಪಾಗಿ ಕೂಡಲೇ ತನ್ನ ಕತ್ತಿಯನ್ನು ಹಿಂತಿರುಗಿಸಿ ಅದರ ಸ್ಥಾನದಲ್ಲಿರಿಸಿ, ಹಿಂದಿನಿಂದ ಹೋಗಿ ಅವರ ಮಾತನ್ನು ಆಲಿಸಿದ. "ನಿಮ್ಮ ಮಹಾರಾಜರು ಎಂಥಾ ಬಲಾಡ್ಯರು. ನಾನು ಬೇಹುಗಾರಿಕೆಗೆ ಬಂದಿದ್ದರೂ ಅವರ ಗುಣಕ್ಕೆ ಮಾರುಹೋಗಿದ್ದೇನೆ. ಹಿಂತಿರುಗಿ ನನ್ನ ರಾಜ್ಯಕ್ಕೆ ಹೋಗಿ, ರಾಜನಿಗೆ ಇವರ ಬಗ್ಗೆ ಇರುವ ತಪ್ಪು ಅಭಿಪ್ರಾಯವನ್ನು ಹೋಗಲಾಡಿಸುತ್ತೇನೆ. ನಮ್ಮ ಎರಡೂ ರಾಜ್ಯದವರು ಸುಖ, ಸಂತೋಷದಿಂದ ಇರಬೇಕು" ಎನ್ನುತ್ತಿದ್ದ.

ರಾಜನಿಗೆ ಕೂಡಲೇ ತನ್ನ ತಪ್ಪಿನ ಅರಿವಾಯಿತು. ರಾಜ **ಸಹನೆಯಿಂದ** ಸನ್ಯಾಸಿಯ ಮಾತನ್ನು ಕೇಳಿ, ಸಮಯಕ್ಕೆ ತಕ್ಕಂತೆ, ಅದನ್ನು ಉಪಯೋಗಿಸಿ ಅನಾಹುತದಿಂದ ಪಾರಾದನು. ಆದುದರಿಂದಲೇ ಬಹಳಷ್ಟು ವಿದ್ವಾಂಸರು ಸಹನೆಯನ್ನು ಬಹು ದೊಡ್ಡ ಗುಣ, ಮೌಲ್ಯ ಎಂದು ಹೇಳಿದ್ದಾರೆ. ಸಹನೆಯಿಲ್ಲದವರು ಕುಟುಂಬದಲ್ಲಾಗಲೀ, ಸಮಾಜದಲ್ಲಾಗಲೀ, ರಾಜಕೀಯದಲ್ಲಾಗಲೀ ಇಷ್ಟೇ ಏಕೆ ಎಲ್ಲಾ

ರಂಗದಲ್ಲೂ ಬಾಳಲಾರ. ಅದರಲ್ಲೂ ಪ್ರಜೆಗಳಿಂದಲೇ ಅಸ್ತಿತ್ವ ಪಡೆದ ನಮ್ಮ ಪ್ರಜಾಪ್ರಭುತ್ವ ದೇಶದಲ್ಲಿ ಎಷ್ಟೋ ಜಾತಿ, ಮತಗಳು, ಪಂಗಡಗಳು, ತತ್ವ ಸಿದ್ಧಾಂತಗಳು ಎಲ್ಲವನ್ನೂ ಅರ್ಥಮಾಡಿಕೊಂಡು, ಭಿನ್ನಾಭಿಪ್ರಾಯಗಳನ್ನೂ ಸಹಿಸಿಕೊಂಡು, 'ಪ್ರತಿಯೊಬ್ಬರೂ ತನ್ನಂತೆ ಎಂಬ ಸಹನೆಯಿಲ್ಲದಿದ್ದರೆ, ಪ್ರಜಾಪ್ರಭುತ್ವವಿರಲು ಸಾಧ್ಯವಿಲ್ಲ'. ವಿಶ್ವ ಕುಟುಂಬದತ್ತ ಸಾಗುತ್ತಿರುವ ನಮಗೆ ಸಹಸೆಯು ಅಗತ್ಯವಾಗಿರುವುದರಿಂದ ಮಕ್ಕಳಿಗೆ ಸಣ್ಣ, ಪುಟ್ಟ ಸಹನೆಯಿಂದ ಸಾರ್ವತ್ರಿಕ ಸಹನೆಯವರೆಗೆ ತಾಳ್ಮೆಯ ಪಾಠವನ್ನು ಕಲಿಸಿಕೊಡಬೇಕು. 'ಸಹನೆಯ ಮಹತ್ವವಾದ ಸ್ವಲ್ಪ ಸುಖವನ್ನು ಬಿಟ್ಟು ಕೊಟ್ಟು, ಮಹದಾನಂದವನ್ನು ಪಡೆಯುವುದು. ಅಂದರೆ ಅಲ್ಪವನ್ನು ಕೊಟ್ಟು ಅಪಾರ ಪಡೆಯುವುದನ್ನು' ಸೃಜನಶೀಲ ನೆಲೆಯಲ್ಲಿ ಕಥೆಯು ಅರ್ಥಪೂರ್ಣವಾಗಿಸಿದೆ

****

## ತ್ಯಾಗ



"ಪರೋಪಕಾರಾರ್ಥಂ ಇದಂ ಶರೀರಂ" ಎಂಬ ನುಡಿಯಂತೆ 'ಇತರರ ಶ್ರೇಯಸ್ಸಿಗಾಗಿ ಮಾನವ ತನ್ನ ತನು ಮನ ಧನಗಳನ್ನು ಅರ್ಪಿಸುವುದೇ ತ್ಯಾಗ'. ತ್ಯಾಗ ಒಬ್ಬ ವ್ಯಕ್ತಿಯ ಸುಖಕ್ಕಾಗಿ ಆಗಬಹುದು, ಬಹುಜನ ಹಿತಕ್ಕಾಗಿ ಆಗಬಹುದು ಇಲ್ಲವೇ ನಾನು ನನ್ನದು ಎಂಬ ಮಮಕಾರಭಾವದ ವಿಸರ್ಜನೆಗೆ ಆಗಬಹುದು.

ಕಷ್ಟ ಸಹಿಷ್ಣುತೆಗೆ ಸ್ಪಂದಿಸುವ ಮನಸ್ಸು, ಇತರರ ಕಷ್ಟದಲ್ಲಿ ತನ್ನ ಶ್ರೇಯಸ್ಸು, ಸಂತೋಷಗಳನ್ನು ಕಂಡುಕೊಳ್ಳುವ ಹೃದಯ ವೈಶಾಲ್ಯತೆಯ ಮಹತ್ವಕಾಂಕ್ಷೆಯಲ್ಲಿ ತ್ಯಾಗ ಮೌಲ್ಯ ವಿಜೃಂಭಿಸುತ್ತದೆ. ಇತಿಹಾಸ ಪುರಾಣಗಳಲ್ಲಿನ ರಾಮ, ಲಕ್ಷ್ಮಣ, ಕರ್ಣ, ಬಲಿ,

ಹರಿಶ್ಚಂದ್ರ, ಅಶೋಕ ಮೊದಲಾದವರು ತಮ್ಮ ಸುಖ ಜೀವನದಲ್ಲಿನ ಧನಕನಕಾದಿಗಳನ್ನು ತ್ಯಾಗ ಮಾಡಿ ಕಷ್ಟಗಳನ್ನು ಅನುಭವಿಸಿದ ನಂತರ ಸುಖ ಜೀವನ ಕಂಡುಕೊಂಡು ಇತರರಿಗೆ ಮಾದರಿಯಾದರು. ಆಧುನಿಕ ಯುಗಕ್ಕೆ ಬಂದರೆ ಭಾರತದ ಸ್ವಾತಂತ್ರ್ಯ ಹೋರಾಟಗಾರರಾದ, ಗಾಂಧೀಜಿ, ನೆಹರು, ಭಗತ್ ಸಿಂಗ್ ಮೊದಲಾದವರು ಜನರ ಏಳಿಗೆಗಾಗಿ, ಸಾಮಾನ್ಯರ ಅಭಿವೃದ್ಧಿಗಾಗಿ ತಮ್ಮ ಸೌಖ್ಯವನ್ನೇ ತ್ಯಾಗ ಮಾಡಿ ಮಹಾನ್ ಸ್ಥಾನವನ್ನು ಪಡೆದು ನಮ್ಮೆಲ್ಲರ ಹೃದಯದಲ್ಲಿ ನೆಲಸಿರುವುದನ್ನು ಕಾಣಬಹುದು.

ನಮ್ಮಲ್ಲಿನ ಆದರ್ಶ ಮೌಲ್ಯಗಳಲ್ಲಿ ಒಂದಾದ ತ್ಯಾಗ ಮನೋಭಾವವನ್ನು ಮಕ್ಕಳಲ್ಲಿ ಮೂಡಿಸಿ ದೇಶದ ಪ್ರಗತಿಗೆ, ದೇಶ ರಕ್ಷಣೆಗೆ ಪ್ರೋತ್ಸಾಹಿಸುವ ಭವಿಷ್ಯಮುಖಿ ಆಲೋಚನೆಗೆ ಕಥೆಯು ಪ್ರತೀಕವಾಗಿದೆ. ಮಕ್ಕಳು ಇತರರ ಬಗ್ಗೆ ಅನುಕಂಪ ತೋರಿ, ಇತರರ ಅಗತ್ಯತೆಗಳನ್ನು ಅರಿತು ತಮ್ಮ ಅವಶ್ಯಕತೆಗಿಂತ ದೊಡ್ಡದು ಪರರ ಅಗತ್ಯತೆ ಎಂದು ತ್ಯಾಗ ಮಾಡುವ ಅವಶ್ಯಕತೆಯನ್ನು ಮನವರಿಕೆ ಮಾಡುವಲ್ಲಿ ಪೋಷಕರು ಮತ್ತು ಗುರುಗಳ ಪಾತ್ರ ಹಿರಿದಾದುದಾಗಿದೆ. 'ಜನನಿ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಾಸಿ' ಎಂದು ದೇಶಕ್ಕಾಗಿ ಸರ್ವತ್ಯಾಗ ಮಾಡುವ, ಜನರ ಅಭಿವೃದ್ಧಿಗಾಗಿ ಶ್ರಮಿಸುವ ಮನೋಭಾವವನ್ನು ಮಕ್ಕಳಿಗೆ ಕಥೆಗಳ ಮೂಲಕ ಮನದಟ್ಟು ಮಾಡಿ ಮಕ್ಕಳು ತ್ಯಾಗ ಮಾಡುವ ಹೃದಯ ವೈಶಾಲ್ಯತೆಯನ್ನು ಹೊಂದುವಂತೆ ಮಾಡುವಲ್ಲಿನ ಅನುಕೂಲತೆಯನ್ನು **'ಸುಕೇಶಿನಿ ಕಥೆಯು'** ಧ್ವನಿಸುತ್ತದೆ.

**೩. ಸುಕೇಶಿನಿ:** ಮೇರು ಪರ್ವತದ ಅಡಿಯಲ್ಲಿರುವ ಮಂದಾರ ಪಟ್ಟಣದಲ್ಲಿ ನೀರೇ ಇಲ್ಲದೆ ಬರ ಉಂಟಾಗಿತ್ತು. ಸುಕೇಶಿನಿ ಮತ್ತು ಅವಳ ವಿಧವೆ ತಾಯಿ ಈ ಪ್ರದೇಶದಲ್ಲಿ ವಾಸವಾಗಿದ್ದರು. ಉದ್ದವಾದ, ನೀಳವಾದ ಕೂದಲನ್ನು ಹೊಂದಿದ್ದ ಸುಕೇಶಿನಿಯು ತನ್ನ ಆಕಳಿಗೆ ಹಸಿರು ಹುಲ್ಲನ್ನು ಹುಡುಕಿಕೊಂಡು ಬೆಟ್ಟವನ್ನು ಕಷ್ಟಾಪಟ್ಟು ಹತ್ತಿ ಹೋದಳು. ಅಲ್ಲೊಂದು ಹಸಿರು ಬಳ್ಳಿಯನ್ನು ಕಂಡು ಸಂತೋಷದಿಂದ ಎಳೆದಾಗ ಅದರ ಬುಡದಲ್ಲಿದ್ದ ಕುಂಬಳಕಾಯಿಯೊಂದಿಗೆ ಬಳ್ಳಿ ಕಿತ್ತು ಬಂದಾಗ, ನೀರಿನ ಬುಗ್ಗೆಯೊಂದು ಚಿಮ್ಮಿತು.

ಅಷ್ಟು ನೀರು ಎಂದೂ ನೋಡಿರದ ಸುಕೇಶಿನಿ ಅದರಲ್ಲಿ ಕುಣಿದಾಡುತ್ತಿದ್ದಂತೆ, ಸುಂಟರಗಾಳಿಯೊಂದು ಬೀಸಿ ಕುಂಬಳಕಾಯಿ ಮತ್ತೆ ಮೊದಲಿದ್ದ ಸ್ಥಳಕ್ಕೆ ಹೋಗಿ ಸೇರಿತು. ಅದರ ಜೊತೆಯಲ್ಲಿಯೇ ಸುಕೇಶಿನಿಯನ್ನು ಸುಂಟರಗಾಳಿಯು ಕೋರೆಹಲ್ಲಿನ ರಾಕ್ಷಸನ ಹತ್ತಿರ ಕೊಂಡೊಯ್ಯಿತು. ನೀರಿನ ತಾಣದ ಬಗ್ಗೆ ಯಾರಿಗೂ ಹೇಳಬಾರದೆಂದು

ಹೇಳಿದರೆ, "ನಿನ್ನನ್ನು ಈ ಸರೋವರದ ಕೆಳಗೆ ಹುಗಿದು ನಿನ್ನ ಉದ್ದವಾದ ಕೂದಲಿನ ಮೇಲೆ ಸದಾಕಾಲ ತಣ್ಣೀರು ಹರಿಯುವಂತೆ ಮಾಡುತ್ತೇನೆಂದು" ಬೆದರಿಸಿತು.

ಹಳ್ಳಿಯಲ್ಲಿನ ಬರ ನೋಡಲಾಗದೆ ಸುಕೇಶಿನಿಯು ನೀರಿನ ತಾಣದ ವಿಚಾರವನ್ನು ತನ್ನ ಬಗ್ಗೆ ಯೋಚಿಸದೆ, ರಾಕ್ಷಸಕೊಟ್ಟ ಬೆದರಿಕೆಯೊಂದಿಗೆ ಹೇಳಿದಳು. ಊರಿಗಾಗಿ ತನ್ನ ಪ್ರಾಣವನ್ನೇ **ತ್ಯಾಗ** ಮಾಡಲು ಸಿದ್ದಳಾದ ಸುಕೇಶಿನಿಯನ್ನು ಊರಿನ ಜನರೆಲ್ಲ ಪ್ರಶಂಸಿಸಿ, ಅವಳನ್ನು ರಕ್ಷಿಸುವ ಜೊತೆಗೆ ನೀರನ್ನು ಪಡೆಯುವ ಉಪಾಯ ಮಾಡಿದರು. 'ಸುಕೇಶಿನಿಯಂತೆ ಒಂದು ಮರದ ಬೊಂಬೆಯನ್ನು ಮಾಡಿಸಿಕೊಂಡು, ಅದರ ತಲೆಗೆ ಅವಳ ನೀಳವಾದ ಕೂದಲನ್ನು ಕತ್ತರಿಸಿ ಅಂಟಿಸಿ ಪರ್ವತಕ್ಕೆ ಕರೆದೊಯ್ದು, ಬಳ್ಳಿಯ ಕೆಳಗಿನ ಕುಂಬಳಕಾಯನ್ನು ಸರಿಸಿ, ನೀರು ಬೆಟ್ಟದ ಮೇಲಿಂದ ಊರಿಗೆ ಹರಿಯುವಂತೆ ಮಾಡಲಾಯಿತು. ಇದನ್ನು ಕಂಡ ರಾಕ್ಷಸ, ಮರದ ಬೊಂಬೆಯ ಸುಕೇಶಿನಿಯನ್ನು ಪರ್ವತದಲ್ಲಿ ಹುಗಿದು ಅವಳ ಕೂದಲ ಮೇಲೆ ನೀರು ಹರಿಯುವಂತೆ ಮಾಡಿ, ನಿರಾಸೆ ಮತ್ತು ಕೋಪದಿಂದ ರಾಕ್ಷಸ ಆ ಪ್ರದೇಶ ಬಿಟ್ಟು ಹೊರಟುಹೋದ.

ಹೀಗೆ ಊರಿಗಾಗಿ ಪ್ರಾಣ ತ್ಯಾಗ ಮಾಡಲು ಸಿದ್ಧಳಿದ್ದ ಸುಕೇಶಿನಿಯು ಊರ ಜನರ ಉಪಾಯದಿಂದ ಪ್ರಾಣಾಪಾಯದಿಂದ ಪಾರಾದಳು. ಕಥೆಯಲ್ಲಿ ತ್ಯಾಗ ಮೌಲ್ಯ ಪ್ರಧಾನ ಕಾಳಜಿಗೆ ಒಳಗಾಗಿದ್ದು, ಮಕ್ಕಳಲ್ಲಿ ಈ ಮೌಲ್ಯದ ಬೆಳವಣಿಗೆಯನ್ನು ಪ್ರೇರೇಪಿಸಿ, ಎಲ್ಲಿ, ಹೇಗೆ, ಯಾವಾಗ ಅದನ್ನು ಉಪಯೋಗಿಸಬೇಕು ಎಂಬುದರ ಅರಿವನ್ನು ಮೂಡಿಸುವುದರ ವಿಶೇಷತೆಯನ್ನು ಗಮನಿಸಬಹುದು. ನಮ್ಮಲ್ಲಿನ ಅನೇಕ ಆದರ್ಶ ಮೌಲ್ಯಗಳಲ್ಲಿ ಒಂದಾದ ತ್ಯಾಗ ಮನೋಭಾವವನ್ನು ಮಕ್ಕಳಲ್ಲಿ ಮೂಡಿಸಿ ದೇಶದ ಪ್ರಗತಿಗೆ, ದೇಶರಕ್ಷಣೆಗೆ ಪ್ರೋತ್ಸಾಹಿಸುವಲ್ಲಿ ಈ ಕಥೆಯು ಬಹು ಉಪಯೋಗಕಾರಿಯಾದುದನ್ನು ಗಮನಿಸಬಹುದು.

ಮಕ್ಕಳು ಇತರರ ಬಗ್ಗೆ ಅನುಕಂಪ ತೋರಿ ತ್ಯಾಗ ಮಾಡುವ, ಇತರ ಜನರ ಅಗತ್ಯತೆಗಳನ್ನು ಅರಿತು **'ನಿನ್ನ ಅಗತ್ಯತೆ ನನ್ನ ಅವಶ್ಯಕತೆಗಿಂತ ಹಿರಿದು'** ಎಂದು ಜನತೆಯ ಬಗ್ಗೆ ಅನುಕಂಪ ತೋರಿ ಅವರ ಅಭಿವೃದ್ಧಿಗಾಗಿ ಶ್ರಮಿಸುವ, ತ್ಯಾಗ ಮಾಡುವ ಅವಶ್ಯಕತೆಯನ್ನು ಕಂಡುಕೊಂಡು ವಿವಿದ ಪ್ರಾಪಂಚಿಕ ವಿಷಯಗಳಲ್ಲಿ ತೊಡಗಿ, ದೇಶದ ಕೀರ್ತಿ ಪತಾಕೆಯನ್ನು ಗಗನದೆತ್ತರಕ್ಕೆ ಹಾರಿಸುವಂತಾಗಬೇಕು. ಕೆಲವು ಸಮಯ, ಸಂದರ್ಭಕ್ಕೆ ತಕ್ಕಂತೆ ತನ್ನ ಒಂದು ಜೀವಕ್ಕೆ ಬದಲಾಗಿ ಇಲ್ಲವೆ ಸುಖಕ್ಕೆ ಬದಲಾಗಿ ಇಡೀ

ಊರೇ ಬದುಕುವ ಸ್ಥಿತಿ ಬಂದಾಗ ಸದಾ ಸಿದ್ದರಿದ್ದು, ತನ್ನ ಜೀವ ಅಥವಾ ಸುಖ ತ್ಯಾಗ ಮಾಡಲು ಸಿದ್ದರಾಗಿರುವುದು, ಆದರ್ಶ ಜೀವನವಾಗುವುದು ಎಂಬುದನ್ನು 'ಸುಕೇಶಿನಿಯ' ಪಾತ್ರದೊಂದಿಗೆ ತಿಳಿಸಿರುವುದು ಮೌಲ್ಯ ಅಳವಡಿಕೆ ಮನೋಭಾವವನ್ನು ಹೆಚ್ಚು ಬಲಯುತಗೊಳಿಸುವ ಸಾಧ್ಯತೆಯನ್ನು ಕಾಣಲಾಗಿದೆ.

****

## ಸತ್ಯ



ನಮ್ಮ ಭಾರತೀಯ ಸಂಸ್ಕೃತಿಯು ದೈವೀಕರಿಸಲ್ಪಟ್ಟು "ಸತ್ಯಂ, ಶಿವಂ, ಸುಂದರಂ" ಎಂಬ ಅರ್ಥಗರ್ಬಿತ ಪದಗಳ ಮೇಲೆ ವಿವರಿಸಲ್ಪಟ್ಟಿದೆ. ಸಾಹಿತ್ಯಾತ್ಮಕವಾಗಿ ಇದರ ನೈಜ ಅರ್ಥವೆಂದರೆ ನಿಜವಾದದ್ದು, ಮಂಗಳಕರವಾದದ್ದು, ಸೌಂದರ್ಯದಿಂದ ಕೂಡಿದ್ದು ಎಂದರ್ಥ. ಉಪನಿಷತ್‌ಗಳು ಪರಮಾತ್ಮನು ನಿರ್ವಿಕಾರ ಬ್ರಹ್ಮ ಎಂದು ಕರೆದಿದೆ. ಅಂದರೆ ಸತ್ಯ ದೃಷ್ಟಿಯನ್ನು ಹೊಂದಿರುವವನು ಭಗವಂತನು ಮಾತ್ರ. ವಿಶ್ವದಲ್ಲಿ ಕಾಣುವ ಪ್ರತಿಯೊಂದು ವಸ್ತುವೂ ಬದಲಾವಣೆಯ ತತ್ವಕ್ಕೆ ಒಳಪಡುತ್ತದೆ. ಈ ಬದಲಾವಣೆ ಆಂತರಿಕ ಹಾಗೂ ಬಾಹ್ಯ ಪ್ರಪಂಚದಲ್ಲಿ ಆಗುತ್ತಲಿರುತ್ತದೆ. ಉದಾಹರಣೆಗೆ, ಇಂದಿನ ಸೂರ್ಯನ ಬೆಳಕಿಗೂ, ನಾಳಿನ ಸೂರ್ಯನ ಬೆಳಕಿಗೂ ವ್ಯತ್ಯಾಸವಿಲ್ಲವೆಂಬ ಭಾವನೆ ಮೂಡುತ್ತದೆ.(ಋತುವಿನ ಆಧಾರದಲ್ಲಿ ಬದಲಾಗಬಹುದು. ಆದರೆ ಬೇಸಿಗೆ ಸಂದರ್ಭದಲ್ಲಿ ಸಾಮಾನ್ಯವಾಗಿ ಒಂದೇ ರೀತಿ ಕಾಣಿಸುತ್ತದೆ). ಆದರೆ ವೈಜ್ಞಾನಿಕ ದೃಷ್ಟಿಯಿಂದ ಸ್ಪಷ್ಟವಾಗಿ ಅವಲೋಕಿಸಿದರೆ ಇಂದಿನ ಹಾಗೂ ನಾಳಿನ ಸೂರ್ಯನಿಗೆ ವ್ಯತ್ಯಾಸವಿದೆ. ಹೇಗೆ ಸುಮಾರು ೩-೪ ಗಂಟೆಗಳ ಕಾಲ ಉರಿಯುವ ದೀಪ ಒಂದೇ ಆದರು ಅದರಲ್ಲಿ ನಮಗೆ ಅಗೋಚರವಾದ, ಕಣ್ಣಿಗೆ ಕಾಣಿಸದ, ಸ್ಪಷ್ಟ ತಿಳುವಳಿಕೆಗೆ ಬಾರದ ಬದಲಾವಣೆ ಇದ್ದೇ ಇರುತ್ತದೆ.

ಶೈಶಾವ್ಯವಸ್ಥೆಯಿಂದ ವಯಸ್ಕನಾಗುವವರೆಗೆ ವ್ಯಕ್ತಿ ಒಬ್ಬನೇ ಆದರೂ ಬೆಳವಣಿಗೆಯಲ್ಲಿ ವ್ಯತ್ಯಾಸ ಕಂಡು ಬರುತ್ತದೆ. ಬದಲಾವಣೆಗೆ ಒಳಗಾಗದಿರುವುದು ಒಬ್ಬ ಮಾತ್ರ. ಅವನೇ ಪರಬ್ರಹ್ಮ. ಇದು ಕಟು ಸತ್ಯ. ದಿನ ನಿತ್ಯದ ಕಾಯಕಲ್ಪದ ವ್ಯವಹಾರಿಕ ವಿಶ್ವದಲ್ಲಿ ವಿವಿಧ ರೀತಿಯ ಸತ್ಯದ ಬಗ್ಗೆ ಹೇಳುತ್ತೇವೆ. ಶಾಶ್ವತ ಸತ್ಯ, ವೈಜ್ಞಾನಿಕ ಸತ್ಯ, ಸದ್ಯದ ಸತ್ಯ ಮೊದಲಾದ ಪರಿಕಲ್ಪನೆ ಹೊಂದಿಲಾಗಿದೆ. ಈ ಎಲ್ಲಾ ಸತ್ಯವು ಜೀವನದಲ್ಲಿ ಮಹತ್ವವಾದವುಗಳು. ಪ್ರಜ್ಞಾವಂತರ ಪ್ರಕಾರ "ಸತತ ಆಲಿಸುವಿಕೆಯಿಂದ, ರೂಢಿಯಿಂದ, ಉಪಾಸನೆಯಿಂದ ಕಲಾವಂತರೂ, ಸಾಹಿತ್ಯಾರಾಧಕರೂ, ಉಪಾಸಕರೂ ಸಹ ಸತ್ಯ ದರ್ಶನ ಪಡೆದಿದ್ದಾರೆ" ಎಂಬು ಅಕ್ಷರಶಃ ಸತ್ಯ. ಬಹುಮುಖ ಪ್ರತಿಭೆಯ ಕಲಾವಿಧರಾದ **ರವೀಂದ್ರನಾಥ ಠಾಗೂರವರು** ಭಗವಂತನ ಸತ್ಯದರ್ಶನವನ್ನು, ಪರಮಾನಂದವನ್ನು, ಸಂತೃಪ್ತಿಯನ್ನು ಆರ್ಯ ಸಮಾಜದ ಅಭಿವೃದ್ದಿಯಲ್ಲಿ, ಅಭ್ಯುದಯಲ್ಲಿ, ಕಥಾ, ಕವಿತೆ, ಅನುವಾದಗಳ ರಚನೆ, ಸಂಗೀತ, ನಾಟಕ, ನೃತ್ಯ, ಅಭ್ಯಾಸದಿಂದ ಕಲಾಪರಿಪೂರ್ಣತೆಯನ್ನು ಪಡೆದರು.

**ಮಹಾತ್ಮ ಗಾಂಧೀಜಿಯವರು** ಇತಿಹಾಸ ಅವಲೋಕನ ಘಟನೆಗಳಿಂದ, ರಾಮಾಯಣ, ಭಗವದ್ಗೀತೆ, ಹರಿಶ್ಚಂದ್ರ ಕಥೆಗಳಿಂದ, ಪುಸ್ತಕಾವಲೋಕನದಿಂದ, ಸ್ವಾನುಭವದಿಂದ ಸತ್ಯದ ಆರಾಧಕರಾಗಿದ್ದರು. ಇಂತಹವರು ಮಕ್ಕಳಲ್ಲಿ ಸತ್ಯ ಮೌಲ್ಯದ ಬೆಳವಣಿಗೆಗೆ ಆದರ್ಶಯುತರಾಗುವರು ಎಂಬುದನ್ನು ಬಹಳಷ್ಟು ಕಥೆಗಳಿಂದ ಖಚಿತಗೊಂಡಿರುವುದನ್ನು ನೋಡಬಹುದು. ಸತ್ಯದ ವಿಶೇಷತೆಯನ್ನು ತಿಳಿಸುವ ಮೂಲಕ ಸತ್ಯ ಮೌಲ್ಯವಾಗಿ ಅನಾವರಣಗೊಳ್ಳುತ್ತಿರುವುದನ್ನು 'ಪಿಂಗಳನ ಕಥೆ'ಯಲ್ಲಿ ಸ್ಪಷ್ಟಪಡಿಸಲಾಗಿದೆ.

**೪. ಪಿಂಗಳನ ಕಥೆ :** ಹಿಂದೆ ಗಾಂಧಾರ ದೇಶದಲ್ಲಿ ವಿದ್ಯಾಧರನೆಂಬ ಒಬ್ಬ ಸಾಮ್ರಾಟನಿದ್ದ. ಅವನಿಗೆ ಹೂವಿನ ಹುಚ್ಚಿದ್ದರಿಂದ ಅರಮನೆಯ ತೋಟದಲ್ಲಿ ಬಗೆ ಬಗೆಯ ಹೂಗಳನ್ನು ಬೆಳೆಸುತ್ತಿದ್ದ. ಜೊತೆಗೆ ಬೇರೇ ದೇಶಗಳಿಂದಲೂ ಹೂ ತರಿಸಿ ಅದರ ತಳಿಗಳನ್ನು ಬೆಳೆಸಲು ಪ್ರಯತ್ನಿಸುತ್ತಿದ್ದ. ರಾಜನಿಗೆ ಮಕ್ಕಳಿರಲಿಲ್ಲವಾದ್ದರಿಂದ 'ತನ್ನ ರಾಜ್ಯಕ್ಕೆ ಯಾರು ವಾರಸುದಾರರು?' ಎನ್ನುವ ಚಿಂತೆ ಸದಾಕಾಲ ಕಾಡುತ್ತಿತ್ತು.

ಒಂದು ದಿನ ರಾಜ ವಿದ್ಯಾಧರ "ನಾನು ಎಲ್ಲ ಮಕ್ಕಳಿಗೆ ವಿಧವಿಧವಾದ ಹೂವಿನ ಬೀಜಗಳನ್ನು ಕೊಡುತ್ತೇನೆ. ಆರು ತಿಂಗಳಲ್ಲಿ ಅದನ್ನು ಬೆಳೆದು ತೋರಿಸಬೇಕು. ಯಾರು

ಚೆನ್ನಾಗಿ ಬೆಳೆಯುತ್ತಾರೋ ಅವರನ್ನು ದತ್ತು ತೆಗೆದುಕೊಳ್ಳುತ್ತೇನೆ. ಆ ಮಗುವೇ ಮುಂದೆ ಈ ರಾಜ್ಯಕ್ಕೆ ರಾಜನಾಗುತ್ತಾನೆ" ಎಂದು ಡಂಗೂರ ಹೊಡೆಸಿದ. ಅರಮನೆಯ ಆವರಣದಲ್ಲಿ ಎಲ್ಲರೂ ಬಂದು ಸೇರಿದರು. ಸಾವಿರಾರು ಮಕ್ಕಳು ಅವರ ಪಾಲಕರೂ ಬಂದು ಸೇರಿದರು. ಅವರಲ್ಲಿ ರಾಜನಂತೆ ಗಿಡಗಳ ಮತ್ತು ಹೂವಿನ ಹುಚ್ಚು ಇದ್ದ **ಪಿಂಗಳ**ನೆಂಬುವವನೂ ಇದ್ದ.

ರಾಜ ಎಲ್ಲರಿಗೂ ಬೀಜಗಳನ್ನು ಹಂಚಿದ. ಎಲ್ಲಾ ಪಾಲಕರಿಗೂ ತಮ್ಮ ಮಗ ರಾಜನಾಗಲೀ ಎನ್ನುವ ಆಸೆಯಿಂದ, ಅವರೂ ಮಕ್ಕಳೊಂದಿಗೆ ಗಿಡದ ಆರೈಕೆಯಲ್ಲಿ ತೊಡಗಿಕೊಂಡರು. ಪಿಂಗಳ ಕುಂಡದಲ್ಲಿ ಹೊಸ ಮಣ್ಣು, ಗೊಬ್ಬರ ಹಾಕಿ, ಬೀಜಗಳನ್ನು ಬಿತ್ತಿದ. ಪ್ರತಿದಿನ ತಪ್ಪದೆ ನೀರು ಹಾಕಿದ. ಎರಡು ತಿಂಗಳಾದರೂ ಮೊಳಕೆ ಒಡೆಯಲೇ ಇಲ್ಲ. ಆದರೆ ಉಳಿದ ಮಕ್ಕಳ ಕುಂಡದಲ್ಲಿ ಬೀಜಗಳೂ ಮೊಳೆತಿದ್ದವು. ಕೊನೆಗೆ ಸ್ಪರ್ಧೆಯ ದಿನ ಬಂದಿತು. ಮಕ್ಕಳೆಲ್ಲಾ ಒಳ್ಳೊಳ್ಳೆಯ ಬಟ್ಟೆ ಧರಿಸಿ, ಗಿಡವಿದ್ದ ಕುಂಡದೊಂದಿಗೆ ಅರಮನೆಯ ಮುಂದೆ ಸೇರಿದರು. ಪಿಂಗಳನು ತನ್ನ ಕುಂಡದಲ್ಲಿ ಗಿಡ ಬರದಿದ್ದರಿಂದ ಸ್ಪರ್ಧೆಗೆ ಹೋಗಲು ನಿರಾಕರಿಸಿದಾಗ, ತಂದೆ ಬುದ್ಧಿವಾದ ಹೇಳಿ ಕಳುಹಿಸಿದರು.

ಮಹಾರಾಜ ಪ್ರತಿಯೊಬ್ಬರ ಹೂವಿನ ಗಿಡಗಳನ್ನು ನೋಡುತ್ತಾ ಬಂದ. ಆದರೆ ಅವನ ಮುಖದಲ್ಲಿ ಸಂತೋಷವೇ ಇರಲಿಲ್ಲ. ಕೊನೆಗೆ ಆತ ಪಿಂಗಳನ ಕುಂಡದ ಹತ್ತಿರ ಬಂದು "ಮಗೂ, ನಾನು ಹೂವಿನ ಗಿಡಗಳ ಸ್ಪರ್ಧೆಗೆ ಕರೆದರೆ ನೀನು ಬರೀ ಕುಂಡ ಹೊತ್ತು ತಂದಿದ್ದೀಯಲ್ಲಪ್ಪಾ?" ಎಂದು ಕೇಳಿದನು. ಅದಕ್ಕೆ ಪಿಂಗಳ "ಅರಸರೇ, ನಾನು ನನ್ನ ಪ್ರಯತ್ನವನ್ನು ಶಕ್ತಿ ಮೀರಿ ಮಾಡಿದ್ದೇನೆ. ಅದಕ್ಕೆ ಸ್ಪರ್ಧೆಗೆ ಬಂದೆ" ಎಂದು ಉತ್ತರಿಸಿದ.

ರಾಜ ವಿದ್ಯಾಧರ ನಕ್ಕು "ಈ ಸ್ಪರ್ಧೆಯಲ್ಲಿ ಜಯ ಪಡೆದವನು ನೀನೆ. ಏಕೆಂದರೆ ನಾನು ಕೊಟ್ಟ ಬೀಜಗಳೆಲ್ಲಾ ಹುರಿದ ಬೀಜಗಳಾಗಿದ್ದವು. ಎಂತಾ ಆರೈಕೆ ಮಾಡಿದರೂ ಗಿಡಗಳು ಬರುತ್ತಿರಲಿಲ್ಲ. ತಮ್ಮ ಮಕ್ಕಳು ರಾಜನಾಗಲೆಂದು ಅವರವರ ತಂದೆತಾಯಿಗಳು ಬೇರೆ ಬೀಜವನ್ನು ಬಿತ್ತಿ ಹೂ ತರಿಸಿದ್ದಾರೆ. **ನೀನು ಮಾತ್ರ ಸತ್ಯಸಂಧ**. ರಾಜನಾಗುವ ಅರ್ಹತೆ ನಿನಗೆ ಮಾತ್ರ ಇದೆ" ಎಂದ. ಮಕ್ಕಳಿಗೆ ಸತ್ಯ ಮೌಲ್ಯದ ದರ್ಶನವನ್ನು ಮಾತಿನ ಮೂಲಕ ಹೇಳುವ ಬದಲು, ಅವುಗಳಿಗೆ ಸಂಬಂಧಿಸಿದ ವಿಷಯ ವರ್ಣನಾ ವೈಖರಿಯನ್ನು, ಸತ್ಯ ಪ್ರತಿಪಾದನೆಯನ್ನು ಸೌಂದರ್ಯಾತ್ಮಕ ಹೃದಯಸ್ಪರ್ಶಿಯಾಗಿ ಬರೆಯಲ್ಪಟ್ಟ ಕಥೆಗಳಿಂದ ಹೇಳಿದಾಗ ಮಾತ್ರ ಪರಿಣಾಮಕಾರಿಯಾಗಿರುವುದು ಪಿಂಗಳನ ಕಥೆಯ ವಿಶ್ಲೇಷಣೆಯಲ್ಲಿ ಗೋಚರಿಸಿದೆ.

ಕಥೆಗಳು ಮಕ್ಕಳ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರುವುದು. ಸತ್ಯದ ನೀತಿ ಕಥೆಯ ಮಹತ್ವವೆಂದರೆ ನಿತ್ಯ ಜೀವನದಲ್ಲಿ ಮಕ್ಕಳು ಸತ್ಯ ಹೇಳುವುದರ ಕಡೆ ಕೇಂದ್ರೀಕೃತರಾಗಬೇಕು. ಇಂದು ಸ್ವತಂತ್ರವಾಗಿ ಮಾತನಾಡುವುದು, ಇದ್ದದ್ದನ್ನು ಇದ್ದಂತೆ ಹೇಳುವುದು, ನಿತ್ಯ ಜೀವನದಲ್ಲಿ ರಾಜಕೀಯ ವ್ಯವಹಾರದಲ್ಲಿ ಕಷ್ಟವಾಗಿದೆ. ಅದುದರಿಂದ **ಸತ್ಯವನ್ನು ಪುರಸ್ಕರಿಸಿ, ಅಸತ್ಯವನ್ನು ತಿರಸ್ಕರಿಸಿ** ಸೌಂದರ್ಯವನ್ನು ರಕ್ಷಿಸಿ, ಕೆಟ್ಟ ಕೆಲಸಗಳಿಂದ ದೂರವಿದ್ದು, ಸತ್ಯಂ ಶಿವಂ ಸುಂದರಂಗಳ ಮೌಲ್ಯಗಳ ಗುಣವಿಶೇಷತೆಗಳನ್ನು ಅಳವಡಿಸಿ, ಅನುಭವಿಸಿ, ಆತ್ಮ ಸಾಕ್ಷಾತ್ಕಾರ ಪಡೆಯಲು ಕಥೆಯು ಸಹಕಾರಿಯಾದುದನ್ನು ಪಿಂಗಳನ ಕಥೆಯಲ್ಲಿ ಕಾಣಲಾಗಿದೆ. ಉತ್ತಮ ಆದರ್ಶ ಪ್ರಜೆಗಳೂ, ಆಡಳಿತಗಾರರೂ ಆಗುವ ಮಕ್ಕಳಿಗೆ ಪೋಷಕರು, ಶಿಕ್ಷಣ ಸಂಸ್ಥೆಗಳು ಸತ್ಯವನ್ನು ನುಡಿಯುವುದರ ಜೊತೆಗೆ ಸತ್ಯ ಮಾರ್ಗದಲ್ಲಿ ನಡೆಯಲು, ದೇಶದ ಅಭ್ಯುದಯಕ್ಕೆ ಶ್ರಮಿಸಲು ಉತ್ತೇಜನ ನೀಡುವ ಕಥೆಗಳಿಗೆ ಒತ್ತನ್ನು ನೀಡಿ, ಮಕ್ಕಳಿಗೆ ಸಮಯ ಸಂದರ್ಭಕ್ಕೆ ತಕ್ಕಂತೆ ಸತ್ಯ ಪಾಲನೆ ಮಾಡಬೇಕೆಂಬ ನೀತಿ ಸಂದೇಶವನ್ನು ಕಥೆಯು ಹೊರ ತರುವುದನ್ನು ಅಧ್ಯಯನದಲ್ಲಿ ಕಾಣಲಾಗಿದೆ.

****

## ದೇಶಭಕ್ತಿ



ದೇಶಭಕ್ತಿ ಎಂದರೆ "ಜನ್ಮಭೂಮಿಯ ಬಗೆಗಿನ ಪೂಜನೀಯ ಭಾವನೆ. ಸಾಂಸ್ಕೃತಿಕ ಭಾಂದವ್ಯವಾಗಿದೆ". ತನ್ನ ದೇಶವನ್ನು ಪ್ರೀತಿಸುವುದು ಹಾಗೂ ಸದಾ ಅದರ ಕಲ್ಯಾಣವನ್ನು ಯೋಚಿಸುವುದಾಗಿದೆ. ದೇಶಭಕ್ತಿಯು ಹೆಚ್ಚು ಪ್ರಭಾವಿತವಾದುದು ಎಲಿಝಬೆತ್ ರವರ ಯುಗದಲ್ಲಿ. ನಮ್ಮ ದೇಶದಲ್ಲಿ ಬ್ರಿಟೀಷರ ಆಗಮನದ ನಂತರ ದೇಶಭಕ್ತಿಯು ಹೆಚ್ಚು ಪ್ರಬಲವಾಯಿತೆಂಬುದು ಇತಿಹಾಸದಿಂದ ತಿಳಿದು ಬಂದಿದೆ. ತಮ್ಮ ತಾಯ್ನಾಡನ್ನು ಸ್ವರ್ಗಕ್ಕಿಂತ ಮಿಗಿಲಾದುದೆಂದು ಭಾವಿಸಿ, ಅದಕ್ಕಾಗಿ ತನ್ನ ಪ್ರಾಣತ್ಯಾಗ

ಮಾಡಲು ಸಿದ್ಧರಾಗಿದ್ದ ಮಹಾನ್ ವ್ಯಕ್ತಿಗಳಾದ ರಾಣಾ ಪ್ರತಾಪ್ ಸಿಂಗ್, ಶಿವಾಜಿ, ನೇತಾಜಿ, ಗಾಂದೀಜಿ, ಮೊದಲಾದವರು ಇತಿಹಾಸದಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿರುವುದನ್ನು ಕಾಣಬಹುದು. ಇವರುಗಳ ಬಗ್ಗೆ ತಿಳಿಸುವುದರಿಂದ ಮಕ್ಕಳು ಸತ್ಪ್ರಜೆಯಾಗಿ ದೇಶದ ಭವಿಷ್ಯಕ್ಕೆ ಮಾದರಿಯಾಗಬಹುದು.

ಚಿಕ್ಕಂದಿನಿಂದಲೇ ಮಕ್ಕಳಲ್ಲಿ ಕೆಲವು ಮೌಲ್ಯಗಳು ತಮ್ಮ ಹಿರಿಯರಿಂದ ಬಳುವಳಿಯಾಗಿ ಬಂದಿರುತ್ತವೆ. ಕೆಲವು ಮೌಲ್ಯಗಳು ತಲೆತಲಾಂತರದಿಂದ ಪರಂಪರಾಗತವಾಗಿಯೂ ಬಂದಿದ್ದು, ದೇಶಭಕ್ತಿಯು ಹಾಗೆ ಬಂದ ಮೌಲ್ಯಗಳಲ್ಲಿ ಉನ್ನತ ಮೌಲ್ಯವಾಗಿರುವುದನ್ನು ಕಾಣಬಹುದು. ಬಾಲ್ಯದಿಂದಲೇ ಮಕ್ಕಳ ಹೃದಯದಲ್ಲಿ ಮಾತೃ ಭಕ್ತಿ, ಗುರು ಹಿರಿಯರ ಭಕ್ತಿ ಮೊದಲಾದವು ಮನೆ ಮಾಡಿಕೊಂಡಿದ್ದುದನ್ನು ಕಾಣಬಹುದು. ಇವೆಲ್ಲಕ್ಕಿಂತ ದೇಶಭಕ್ತಿ ಹಿರಿದಾದುದಾಗಿದೆ. ವ್ಯಕ್ತಿತ್ವ ರೂಪಿಸುವಲ್ಲಿ ಸಂಸ್ಕೃತರನ್ನಾಗಿ ಮಾಡುವಲ್ಲಿ ದೇಶದ ಪಾತ್ರ ಬಹು ದೊಡ್ಡದು. ಅದುದರಿಂದ ತಂದೆ, ತಾಯಿ, ಗುರು, ಹಿರಿಯರ ಬಗೆಗಿನ ಪ್ರೀತಿಗಿಂತ, ದೇಶಪ್ರೇಮ ಪ್ರಧಾನವಾದುದು ಎಂಬುದು ಬಹುಮತ ಅಭಿಪ್ರಾಯವಾಗಿರುವುದನ್ನು ಕಾಣಬಹುದು.

ಆದರೆ ಇಂದಿನ ಮಕ್ಕಳು ಸ್ವಾತಂತ್ರೋತ್ತರ ದಿನಗಳಲ್ಲಿ ಬೆಳೆದವರಾದ್ದರಿಂದ ಅವರಿಗೆ ದೇಶಭಕ್ತರ ಬಗ್ಗೆ ಹಾಗೂ ದೇಶಭಕ್ತಿಯ ಬಗ್ಗೆ ಸ್ಪಷ್ಟ ಕಲ್ಪನೆ ಇರುವುದಿಲ್ಲ. ದೇಶಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡ, ದೇಶ ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿ ಹುತಾತ್ಮರಾದ ಮಹಾನ್ ವ್ಯಕ್ತಿಗಳ ಪರಿಚಯವಿಲ್ಲ. ಹಾಗಾದರೆ ದೇಶಭಕ್ತಿಯನ್ನು ಮಕ್ಕಳ್ಳಲ್ಲಿ ಮೂಡಿಸುವುದು ಹೇಗೆ? 'ಗಿಡವಾಗಿ ಬಗ್ಗದು ಮರವಾಗಿ ಬಗ್ಗಿತೆ' ಎಂಬಂತೆ ಎಳೆವಯಸ್ಸಿನಲ್ಲೆ ಮಕ್ಕಳಲ್ಲಿ ದೇಶದ ಬಗ್ಗೆ ಭಕ್ತಿ ಭಾವನೆಯನ್ನು ಮೂಡುವಂತೆ ಮಾಡುವಲ್ಲಿ ಕಥೆಗಳಿಗಿಂತ ಉತ್ತಮವಾದ ಮತ್ತೊಂದಿಲ್ಲ ಎಂಬುದನ್ನು ಈ ಮೊದಲೇ ಕಾಣಲಾಗಿದೆ. ದೇಶಭಕ್ತರ ಮಹೋನ್ನತ ತ್ಯಾಗ, ಉಜ್ವಲ ದೇಶಪ್ರೇಮ, ಧೈರ್ಯ, ಛಲ, ಬಲ, ಧ್ಯೇಯ ಸಾಧನೆಗಳನ್ನು ಚಿತ್ರಿಸುವಲ್ಲಿ ಕಥೆಗಳ ಸೃಜನಶೀಲತೆಯು ಅರ್ಥಪೂರ್ಣವಾಗಿದ್ದು, ದೇಶಭಕ್ತಿಯ ಆದರ್ಶ ಮೌಲ್ಯವನ್ನು ಮೂಡಿಸುವ ಪ್ರಧಾನ ಕಾಳಜಿ ಹೊಂದಿರುವುದನ್ನು **'ನಾಯಿ–ಕೋಳಿ'** ಕಥೆಯಲ್ಲಿ ಕಾಣಬಹುದು.

**೫. ನಾಯಿ–ಕೋಳಿ :** ಅವದೀ ದೇಶವನ್ನು ಕಾಂತಿವರ್ಮನೆಂಬ ರಾಜನು ಆಳುತ್ತಿದ್ದು, ವಜ್ರದತ್ತನೆಂಬ ಬುದ್ಧಿವಂತ ಮಂತ್ರಿಯನ್ನು ತನ್ನ ಆಸ್ಥಾನದಲ್ಲಿ ಹೊಂದಿದ್ದನು. ಮಂತ್ರಿಯ ಸಹಾಯದಿಂದ ರಾಜನು ಯಶಸ್ವಿಯಾಗಿ ದೇಶವನ್ನು ಆಳುತ್ತಿದ್ದನು. ವಜ್ರದತ್ತನಿಗೆ ತನ್ನ ದೇಶದ ಬಗ್ಗೆ **ಅಪಾರವಾದ ಭಕ್ತಿ, ಪ್ರೇಮವಿದ್ದು, ಅದಕ್ಕಾಗಿ ತನ್ನ ಪ್ರಾಣ ತ್ಯಾಗ** ಮಾಡಲು ಸಿದ್ದನಿದ್ದನು. ಮಂತ್ರಿ ವಜ್ರದತ್ತನ ಕೀರ್ತಿ ಎಲ್ಲಾ ಕಡೆಗೂ ಹಬ್ಬಿತ್ತು.

ನೆರೆಯ ರಾಜ್ಯದ ಅರಸ ತೇಜಸಿಂಹ ಬಹು ಬುದ್ಧಿವಂತ, ಚಾಣಾಕ್ಷ ಮತ್ತು ಕುಹಕಿಯಾಗಿದ್ದು, ಕಾಂತಿವರ್ಮನ ರಾಜ್ಯವನ್ನು ಗೆಲ್ಲಲು ಪ್ರಯತ್ನಿಸಿ, ಮಂತ್ರಿ ವಜ್ರದತ್ತನಿಂದಾಗಿ ಸೋಲನ್ನು ಅನುಭವಿಸುತ್ತಿದ್ದ. ಅದುದರಿಂದಾಗಿ ಮಂತ್ರಿ ವಜ್ರದತ್ತನನ್ನು ತನ್ನ ಕಡೆ ಸೆಳೆಯಲು ಯೋಚಿಸಿದನು. ಆದರೆ ವಜ್ರದತ್ತ ಪ್ರಮಾಣಿಕ, ನಿಷ್ಠಾವಂತ. ಹಣದ ಆಸೆಗೆ ಬಗ್ಗುವವನಲ್ಲವೆಂದು, ಉಪಾಯದಿಂದ ಅವನನ್ನು ಹಿಡಿಯಬೇಕೆಂದು ಯೋಚಿಸಿದ. ಅದರಂತೆ ಒಂದು ದಿನ ತೇಜಸಿಂಹ ಕಾಂತಿವರ್ಮನಿಗೆ "ನಿಮ್ಮ ಮಂತ್ರಿ ವಜ್ರದತ್ತನ ಬಗ್ಗೆ ನಮಗೆಲ್ಲಾ ಮೆಚ್ಚುಗೆ ಇದೆ. ನಮ್ಮಲ್ಲಿ ಒಂದು ಉತ್ಸವಕ್ಕೆ ಅವನನ್ನು ಕಳುಹಿಸಬೇಕು" ಎಂದು ಔತಣಕೋಟದ ಕರೆಯೋಲೆಯನ್ನು ಕಳುಹಿಸಿದ. ಇದರ ಹಿಂದಿನ ಸಂಚನ್ನು, ಗೂಡಾರ್ಥವನ್ನು ಅರಿತ ಮಂತ್ರಿ ಹೋಗಲು ಇಷ್ಟವಿಲ್ಲದಿದ್ದರೂ ರಾಜನ ಬಲವಂತಕ್ಕೆ ತೇಜಸಿಂಹನ ರಾಜ್ಯಕ್ಕೆ ಹೋದನು. ಮಂತ್ರಿಯು ಹೋಗುವಾಗ ತನ್ನ ಜೊತೆ  ಆಶ್ರಯ ನೀಡಿದ್ದ ಕಳ್ಳರಿಬ್ಬರು ಸೇರಿದಂತೆ ನಂಬಿಕಸ್ಥ ಹತ್ತು ಗೆಳೆಯರನ್ನು ಕರೆದುಕೋಡು ಹೋದನು.

ಬರೀ ಗೈಯಲ್ಲಿ ಹೋಗಬಾರದೆಂದು ಅಮೂಲ್ಯವಾದ ರೇಷ್ಮೆ ಶಾಲನ್ನು ನೇಯಿಸಿ ತೆಗೆದುಕೊಂಡು ಹೋದನು. ಆದರೆ ಅಲ್ಲಿ ಯಾವುದೇ ಉತ್ಸವವಿರಲಿಲ್ಲ. ಮರುದಿನ ರಾಜನಿಗೆ ಉಡುಗೊರೆಯನ್ನು ನೀಡಿದಾಗ, ಅದನ್ನು ಸ್ವೀಕರಿಸಿದ ರಾಜ "ವಜ್ರದತ್ತ ನಿನ್ನಂತ ನಿಪುಣ ಮಂತ್ರಿಯ ಅವಶ್ಯಕತೆ ನನಗಿಸಿ. ನೀನು ಆ ರಾಜ್ಯವನ್ನು ಬಿಟ್ಟು ನನ್ನ ಬಳಿಗೆ ಬಂದರೆ ನಿನಗೆ ಹೆಚ್ಚಿನ ಸವಲತ್ತು ಮರ್ಯಾದೆ ಎಲ್ಲವನ್ನೂ ಕೊಡುತ್ತೇನೆ" ಎಂದು ಆಮಿಷ ಒಡ್ಡಿದನು. ಇದಕ್ಕೆ ಒಪ್ಪದಿದ್ದಾಗ ಮಂತ್ರಿಯನ್ನು ಬಂದಿಸಿ ಸೆರೆಮನೆಯಲ್ಲಿರಿಸಿದ.

ಮಂತ್ರಿಯ ನಂಬಿಕಸ್ಥ ಹತ್ತು ಗೆಳೆಯರ ಸಹಾಯದಿಂದ ರಾಣಿಯ ಮೂಖೇನ ರಾಜನಿಗೆ ಹೇಳಿ ಮಂತ್ರಿಯು ಬಿಡುಗಡೆಗೊಂಡು ತನ್ನ ರಾಜ್ಯಕ್ಕೆ ಹೋದನು. ಇದನ್ನು ಅರಿತ ರಾಜನು ವಜ್ರದತ್ತನ ಬುದ್ಧಿವಂತಿಕೆಗೆ ಮೆಚ್ಚಿ "ವಜ್ರದತ್ತ ತುಂಬಾ ಬುದ್ಧಿವಂತ. ಆದರೆ ಅವನ ಮನಸ್ಸು ಮಾತ್ರ ಅದೇ ರಾಜ್ಯದಲ್ಲಿದೆ. ನಾನು ಎಷ್ಟೇ ಬಲವಂತ ಮಾಡಿದರೂ ಅವನು ಇಲ್ಲಿ ಬರುವುದಿಲ್ಲ. ಒಂದೊಮ್ಮೆ ಬಂದರೂ ಅವನ ಮನಸ್ಸು ಅಲ್ಲಿರುವುದರಿಂದ ನನಗೆ ಅವನ ಬುದ್ಧಿವಂತಿಕೆಯಿಂದ ಅಪಾಯವೇ ಉಂಟಾಗಬಹುದು. **ಒಂದು ರಾಜ್ಯದ ಏಳಿಗೆಗೆ ಬರೀ ಬುದ್ಧಿವಂತಿಗೆ ಮಾತ್ರ ಸಾಕಾಗುವುದಿಲ್ಲ. ಅದರೊಂದಿಗೆ ಆ ಪ್ರದೇಶದ ಬಗೆಗೆ ಭಕ್ತಿಯೂ ಪ್ರೇಮವೂ** ಇರಬೇಕು. ಹೀಗಾಗಿ ವಜ್ರದತ್ತನನ್ನು ಒತ್ತಾಯದಿಂದ ಪಡೆಯಲು ಸಾಧ್ಯವಿಲ್ಲ" ಎಂದು ಕ್ಷಮಿಸಿದನು.

ಹೀಗೆ ವಜ್ರದತ್ತನ ದೇಶಭಕ್ತಿಯಿಂದ ರಾಜ ತೇಜಸಿಂಹನ ಮನಃಪರಿವರ್ತನೆಯಾಯಿತು. ಜೊತೆಗೆ ಅವದೀ ದೇಶದ ರಾಜ ತೇಜಸಿಂಹ

ಕಾಂತಿವರ್ಮನೊಂದಿಗೆ ಉತ್ತಮ ಸಂಬಂಧ ಬೆಳೆಯಲು ಸಹಕಾರಿಯಾಯಿತು. ವಜ್ರದತ್ತನಂತೆ ಎಲ್ಲರೂ ತನ್ನ ದೇಶದ ಬಗ್ಗೆ ಭಕ್ತಿ, ಪ್ರೇಮ ಹೊಂದಿದ್ದಾಗ ಮಾತ್ರ, ನಮ್ಮ ದೇಶದ ಕೀರ್ತಿಪತಾಕೆ ಎಂದೆಂದಿಗೂ ಹಾರಾಡುವಂತೆ ಮಾಡುವ, ಗೌರವ ತಂದು ಕೊಡುವ ಶ್ರೇಷ್ಠ ಪ್ರತಿಭೆಗಳ ಹುಟ್ಟಿಗೆ ಸಹಕಾರಿಯಾಗುವ ಸಾಧ್ಯತೆಗಳನ್ನು ಕಥೆಯಲ್ಲಿ ಹಿಡಿಯಲಾಗಿದೆ.

ಅಲ್ಲದೆ ದೇಶಭಕ್ತಿಯ ಜೊತೆಗೆ ಇತರ ಪೂರಕ ಸಕಾರತ್ಮಕ ಮೌಲ್ಯಗಳಾದ ಬುದ್ಧಿವಂತಿಕೆ, ಚಾಣಾಕ್ಷತೆ ಮತ್ತು ನಕಾರಾತ್ಮಕ ಮೌಲ್ಯಗಳಾದ ಕುಹಕಿತನ, ಮೋಸದ ಪರಿಚಯವನ್ನೂ ಕಥೆಯು ಸೂಕ್ಷ್ಮವಾಗಿ ಅನಾವರಣಗೊಳಿಸುವ ಮೂಲಕ ಮೌಲ್ಯದ ಮಹತ್ವವನ್ನು ಚಿತ್ರಿಸುವುದನ್ನು ಕಾಣಬಹುದು. **ಕಲಾದಗಿ ಇನಾಮದಾರರವರು ರಚಿಸಿದ ಜಾನಪದ ಝೇಂಕಾರದಲ್ಲಿನ' ಒಂದು ದೇಶಭಕ್ತಿ ಗೀತೆ** ಈ ಮೌಲ್ಯಕ್ಕೆ ಅನ್ವಯಿಸುವಂತಿದ್ದು, ಅರ್ಥವಿಸ್ತಾರವನ್ನು ಹೆಚ್ಚಿಸಿರುವದನ್ನು ಕಾಣಬಹುದು.

"ಜನನಿ ಜನ್ಮಭೂಮಿ ಸೇವಾ ಮಾಡಿದರ,
ಹುಟ್ಟಿ ಬಂದದ್ದಕ್ಕ ಸಾರ್ಥಕ.
ಜನ್ಮ ಭೂಮಿ ಸೇವಾ ಮಾಡದಿದ್ದರ,
ಆಗೂದು ಘಟ್ಟಿ ಅವಗ ನರಕಾ.

(*sampada.net/blog/ದೇಶಭಕ್ತಿ/24-1-2014)*

**ಅಡಿ ಟಿಪ್ಪಣಿ:**

೧. ಅಭಿಜ್ಞ– ಪ್ರ.ಸಂ. ಡಾ.ಹೆಚ್.ಜೆ.ಲಕ್ಕಪ್ಪ ಗೌಡ, ಸಂ. ಆಯಾರಾಜಶೇಖರ. ಪ್ರಕಾಶಕರು– ಡಾ.ಸಾ.ಶಿ.ಮರುಳಯ್ಯ ಅಭಿನಂದನ ಸಮಿತಿ. ೨೦೦೧. ಪು–೯೧,೨

೨. ಕತೆ ಸಣ್ಣದು ಸಂದೇಶ ದೊಡ್ಡದು– ಪ್ರೊ.ಲಲಿತಾಂಬಾ ಚಂದ್ರ ಶೇಖರ್. ಪ್ರಕಾಶನ : ಸಾಹಿತ್ಯ ನಂದನ .೨೦೦೫. ಪು–೧೧, ೨೯, ೪೮, ೮೦, ೮೬, ೧೦೩, ೧೧೮, ೧೫೩, ೧೭೯, ೧೮೩.

೩. ಮಕ್ಕಳಿಗಾಗಿ ನನ್ನ ಮೆಚ್ಚಿನ ಕತೆಗಳು – ಡಾ.ಸುಧಾ ಎನ್ ಮೂರ್ತಿ, ಪ್ರಕಾಶಕರು: ಸ್ವಪ್ನ ಬುಕ್ ಹೌಸ್. ೨೦೦೬. ಎಲ್ಲಾ ಕಥೆಗಳು.

೪. ಸುಕೇಶಿನಿ ಮತ್ತು ಇತರ ಮಕ್ಕಳ ಕಥೆಗಳು – ಡಾ.ಸುಧಾ ಎನ್ ಮೂರ್ತಿ, ಪ್ರಕಾಶಕರು: ಸ್ವಪ್ನ ಬುಕ್ ಹೌಸ್. ೨೦೦೮. ಎಲ್ಲಾ ಕಥೆಗಳು.

೫. ಎಮ್.ಎಡ್ ಅಧ್ಯಯನ ಸಾಮಗ್ರಿ – ಮೈಸೂರು ವಿಶ್ವವಿದ್ಯಾಲಯ. ೨೦೧೩. ಶಿಕ್ಷಣ ತತ್ವಶಾಸ್ತರ ಮತ್ತು ಸಮಾಜಶಾಸ್ತ್ರ ಮೌಲ್ಯ ಮೀಮಾಂಸೆ. ಪು–೨೯,೭೦,೭೪

೬. ಅಂತರ್ ಜಾಲ ಮಾಹಿತಿ. www.kanaja.com ಮಾನವೀಯ ಮೌಲ್ಯಗಳು. ೨೪.೧೦.೨೦೧೪

೭. ಅಂತರ್ ಜಾಲ ಮಾಹಿತಿ. *sampada.net/blog/ದೇಶಭಕ್ತಿ/24-1-2014*

೮. ಅಂತರ್ ಜಾಲ ಮಾಹಿತಿ. *wikipedia.net/blog/ಚಿಂತನೆ /24-1-2014*

೯. ಮೂರ್ಖತೆ – Kannadakasturi.com*24-1-2014*

೧೦. ಕಣಜ > ಜಾನಪದ > ಸಮಗ್ರ ಕನ್ನಡ ಜನಪದ ಮತ್ತು ಯಕ್ಷಗಾನ ಸಾಹಿತ್ಯಮಾಲೆ – ೨೮ > ಪದ್ಯ ಸಾಹಿತ್ಯ ಪ್ರಕಾರ – ೧೫೮ > ರಾಷ್ಟ್ರೀಯ : ೧. ದೇಶಭಕ್ತಿ ೨೨.೦೬.೧೫.

ಸಂಸ್ಕೃತಿಯ ಫಲವಾಗಿ ಬಾರತ ಅಖಂಡ ವಿಶ್ವದಲ್ಲೇ ಮಾನ್ಯತೆ ಪಡೆದು, 'ಭಾರತೀಯ ಸಂಸ್ಕೃತಿ ಪರಂಪರೆ' ಎಂದು ಹೆಮ್ಮೆ ಪಡುವ ಕಾಲವೊಂದಿತ್ತು. ಆದರೆ ಕಾಲಕ್ರಮೇಣ ನಮ್ಮಲ್ಲಿನ ಒಗ್ಗಟ್ಟಿನ ಅಭಾವ, ಆಡಳಿತ ಪ್ರಭಾವ, ಪರಕೀಯರ ದಾಳಿ, ದಬ್ಬಾಳಿಕೆಗಳ ಕಾರಣ, ಸಂಕುಚಿತ ಭಾವನೆ ಏರ್ಪಟ್ಟು, ಆದರ್ಶ ಸಂಸ್ಕೃತಿಯ ವೀಡಾಗಿದ್ದ ಭಾರತದಲ್ಲಿ ಸಂಸ್ಕೃತಿಯ ಉತ್ತಮ ಮೌಲ್ಯಗಳು ಮಾಯವಾಗಿ ಜನರ ನೀತಿ ರೀತಿಯಲ್ಲಿ ಬದಲಾವಣೆ, ಹೃದಯ ವೈಶಾಲ್ಯತೆ ಹಾಗೂ ನೈತಿಕತೆಯಲ್ಲಿ ಅಭಾವ ಏರ್ಪಟ್ಟು, ದ್ವೇಷಾಸೂಯೆಗಳಿಗೆ, ಜಾತಿ ಮತ ದ್ವೇಷಗಳಿಗೆ ಅವಕಾಶವಾಗಿದೆ. ಅಲ್ಲದೆ ಇಂದು ರಾಜಕೀಯ ಸಾಮಾಜಿಕ, ಶೈಕ್ಷಣಿಕ ಮುಂತಾದ ಅಸಮತೆಯಿಂದಾಗಿ ವೈಮನಸ್ಸುಗಳಿಗೆ ಆಸ್ಪದವಾಗಿದೆ. ಇದಕ್ಕೆ ಕಾರಣ ನಮ್ಮ ಮೌಲ್ಯಗಳಾದ ದೇಶಭಕ್ತಿ, ಸತ್ಯ, ಸಹನೆ, ಪ್ರೀತಿ, ದಾನ, ಚಿಂತನಾಶೀಲತೆ ಮೊದಲಾದ ಮೌಲ್ಯಗಳ ಮಹತ್ವದ ತಿಳುವಳಿಕೆಯ ಅಭಾವವಾಗಿರುವುದು ಅರಿವಿಗೆ ಬರುತ್ತದೆ.

ಇಡೀ ಮಾನವನ ಜೀವನವನ್ನು ಮೌಲ್ಯಗಳು ಹಾಸುಹೊಕ್ಕಿರುವುದೇ ಅಲ್ಲದೆ ಅವನ ಅಸ್ತಿತ್ವವನ್ನು ಸ್ಪಷ್ಟಪಡಿಸುತ್ತದೆ. ಮನುಷ್ಯ ಎಂತಹವನೆಂದು ತೀರ್ಮಾನಿಸಲು ಮೌಲ್ಯಗಳು ಮುಖ್ಯವಾದುದಾಗಿವೆ. ಮನುಷ್ಯ ಹೇಗೆ ಬೆಳೆಯುತ್ತಾನೆ ಮತ್ತು ಹೇಗೆ ವರ್ತಿಸುತ್ತಾನೆ ಎಂಬುದನ್ನು ನಿಖರವಾಗಿ ತಿಳಿಸುವಲ್ಲಿ ಮೌಲ್ಯಗಳು ಹೆಚ್ಚು ಉಪಯುಕ್ತವಾಗಿವೆ. ಅಲ್ಲದೆ ವ್ಯಕ್ತಿ ಮತ್ತು ಸಮಾಜದ ದಿಕ್ಕನ್ನು, ಏಳಿಗೆಗಳನ್ನು ಮೌಲ್ಯಗಳು ಸ್ಪಷ್ಟಪಡಿಸುತ್ತವೆ. ಮೌಲ್ಯಗಳು ವ್ಯಕ್ತಿಯನ್ನು ಒಳ್ಳೆಯವನಾಗಿ ಪರಿವರ್ತಿಸುವುದಲ್ಲದೆ, ಅದಕ್ಕೆ ಬೇಕಾದ ಕುಶಲತೆಯನ್ನು ಒದಗಿಸುತ್ತದೆ. ಹೀಗೆ ಉತ್ತಮ ವ್ಯಕ್ತಿತ್ವವನ್ನು ಉತ್ತಮ ಮೌಲ್ಯಗಳೊಂದಿಗೆ ಗುರ್ತಿಸಿಕೊಳ್ಳುವಂತಾಗುತ್ತದೆ.

ಪ್ರತಿ ಮಾನವನೂ ತನ್ನ ರಾಷ್ಟ್ರದ ಪರಂಪರಾನುಗತ ಸಂಸ್ಕೃತಿ ನಾಗರೀಕತೆಗೆ, ಕಾಲದೇಶ ವರ್ತಮಾನಗಳಿಗೆ ಅನುಗುಣವಾಗಿ ಆದ್ಯತೆ ಕೊಡಬೇಕು. ಯಾವುದೇ ಸತ್ಯಾಸತ್ಯತೆ, ವೈಜ್ಞಾನಿಕ ಹಿನ್ನೆಲೆ ಇಲ್ಲದ ಅಂದಾನುಕರಣೆಯು ತಪ್ಪಬೇಕು. ಆಧುನಿಕ ಜನಜೀವನಕ್ಕೆ ದೇಶದ ಪ್ರಗತಿಗೆ ಪೋಷಕವಾದ ಉತ್ತಮ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದ ನಮ್ಮ ಭಾರತದ ಕಡೆಗೆ ಜನರು ಬೆರಳು ತೋರಿಸುವಂತಾಗಬಾರದು. "ವಸುದೈವ ಕುಟುಂಬಕಂ" ಎಂಬ ವಿಶ್ವ ಕೌಟುಂಬಿಕ ತತ್ವವು ಅಖಂಡ ವಿಶ್ವಕ್ಕೆ ಭಾರತೀಯರ ಅತ್ಯುತ್ತಮ ಕೊಡುಗೆ. "ಸರ್ವೇಜನ ಸುಖಿನಾಭವತು" ಮಾನವ ಕುಲದ ಶುಭ ಚಿಂತನೆ ಮುಂತಾದ ಆದರ್ಶನೀಯ ಮೌಲ್ಯದ ಮಹತ್ವವನ್ನು ಮನಗಂಡು

ಮಹಾತ್ಮ ಗಾಂಧಿಜೀ, ವಿವೇಕಾನಂದ, ಟಾಗೂರ್, ರಾಧಾಕೃಷ್ಣನ್ ಮುಂತಾದವರು ಭಾರತೀಯ ಸಾಂಸ್ಕೃತಿಕ ಆದರ್ಶ ಮೌಲ್ಯಗಳ ಅಳವಡಿಕೆಗೆ ಒತ್ತಾಯಿಸಿದ್ದಾರೆ ಎಂಬುದು ನಮಗೆ ತಿಳಿದಿರುವ ಸಂಗತಿಯಾಗಿದೆ. ಅನೇಕ ಶಿಕ್ಷಣ ಆಯೋಗಗಳೂ ಈ ಮೌಲ್ಯಗಳ ಅನುಷ್ಠಾನದ ಬಗ್ಗೆ ಒತ್ತಾಯಿಸಿದ್ದಾರೆ. ನಮ್ಮ ರಾಷ್ಟ್ರದ ಭಾವೀ ಪ್ರಜೆಗಳಿಗೆ ಮಾರ್ಗದರ್ಶನ ನೀಡುವ ಶಿಕ್ಷಣ ನೀಡುವ ಸಂಸ್ಕೃತಿಯ ಬೆನ್ನೆಲುಬಾದ ಶಿಕ್ಷಕರು ಪರಂಪರಾನುಗತ ಸಂಸ್ಕೃತಿಯ ಮೌಲ್ಯಗಳ ಉತ್ತಮಾಂಶಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಪುರಸ್ಕರಿಸಿ, ಪ್ರೋತ್ಸಾಹಿಸಿ, ಸಮನ್ವಯಗೊಳಿಸಿ, ನೀತಿ ಕಥೆಗಳನ್ನು ಹೇಳುವ ಮೂಲಕ ದೇಶದ ಬಹಳಷ್ಟು ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಮಕ್ಕಳನ್ನು ಸಮರ್ಥರನ್ನಾಗಿ ಮಾಡಬೇಕು.

'ಮನೆಯೇ ಮೊದಲ ಪಾಠ ಶಾಲೆ' ಎಂಬಂತೆ ಪೋಷಕರು, ಮನೆಯಲ್ಲಿ ಮಕ್ಕಳು ತಮ್ಮ ಜೊತೆ ಇದ್ದಷ್ಟು ಕಾಲ ನೈತಿಕ ಮೌಲ್ಯಯುತ ಕಥೆಗಳನ್ನು ಹೇಳುವ ಮೂಲಕ ಮಕ್ಕಳಲ್ಲಿ ಮೌಲ್ಯಗಳು ಉಜ್ಜೀವನಗೊಳ್ಳುವಂತೆ ಮಾಡಿ ಆದರ್ಶ ವ್ಯಕ್ತಿತ್ವ ಪಡೆಯುವಂತೆ ಮಾಡಬೇಕು. ತನ್ನ ನಾಡಿನ ಉತ್ತಮ ಆದರ್ಶಗಳ ಬಗ್ಗೆ ಆಲೋಚಿಸದ ಮಾನವ ಉತ್ತಮ ರಾಷ್ಟ್ರ ಪ್ರೇಮಿ, ಪ್ರಜೆಯಾಗಲಾರ. ಆದುದರಿಂದ ಪೋಷಕರು, ಅಧ್ಯಾಪಕರು ಮೌಲ್ಯಗಳಾದ ದೇಶಭಕ್ತಿ, ಸತ್ಯಂ ಶಿವಂ ಸುಂದರಂ, ತ್ಯಾಗ, ಪ್ರೀತಿ ಮೊದಲಾದವುಗಳ ಬಗ್ಗೆ ಪರಿಚಯವನ್ನು ಪಡೆದು ಮಕ್ಕಳಲ್ಲಿ ಇವೆಲ್ಲವನ್ನು ರೂಡಿಸುವಂತೆ ಮಾಡುವಂತಾಗಬೇಕು.

ಒಟ್ಟಾರೆಯಾಗಿ ಜೀವನದಲ್ಲಿ ಕೇವಲ ಒಂದೇ ಮೌಲ್ಯವಿಲ್ಲ. ಅನೇಕ ಮೌಲ್ಯಗಳಿಂದ ಜೀವನ ಆವೃತ್ತವಾಗಿದೆ. ಮೌಲ್ಯ ಅಮೌಲ್ಯಗಳ ನಡುವೆ ದೊಡ್ಡ ಅಂತರವೇ ಇದ್ದು, ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಉತ್ತಮ ವ್ಯಕ್ತಿತ್ವವನ್ನು ಪಡೆಯಬೇಕು. ಇರುವ ಅನೇಕ ಮೌಲ್ಯಗಳಲ್ಲಿ, ಅವುಗಳ ವೈವಿಧ್ಯತೆಯನ್ನು ಪರೀಕ್ಷಿಸಿ ಒಪ್ಪಿಕೊಂಡು ಜೀವನದಲ್ಲಿನ ಸಾಮರಸ್ಯವನ್ನು ಸಾಧಿಸುವಂತ ನಿಟ್ಟಿನಲ್ಲಿ ನೀತಿ ಕಥೆಗಳ ಪಾತ್ರವು ಹಿರಿದಾದುದಾಗಿದೆ. ಡಾ.ಸುಧಾ ಎನ್ ಮೂರ್ತಿ, ವೈದೇಹಿ, ಅನುಪಮ ನಿರಂಜನ, ಅನಸೂಯ, ಕಮಲಾ ಹಂಪನಾ ಮೊದಲಾದ ಮಹಿಳಾ ಮಕ್ಕಳ ಕಥೆಗಾರ್ತಿಯರು ಮೌಲ್ಯಯುತ ಕಥೆಗಳ ರಚನೆ ಮಾಡಿರುವುದು ಪ್ರಶಂಸನೀಯ.

ವೈಜ್ಞಾನಿಕ ಕ್ಷೇತ್ರದಲ್ಲಿನ ತಾಂತ್ರಿಕ ವಲಯದಲ್ಲಿ ಹೆಸರುವಾಸಿಯಾದ ಡಾ.ಸುಧಾ ಎನ್ ಮೂರ್ತಿರವರ ಮಕ್ಕಳ ಕಥಾ ರಚನೆಯು ಮೌಲ್ಯಯುತವಾದ ರಚನೆಯಿಂದ ಕೂಡಿದ್ದು, ಮಕ್ಕಳಲ್ಲಿ ಮೌಲ್ಯಗಳ ಬೆಳವಣಿಗೆಗೆ ಮಾದರಿಯಾಗಿದೆ. ಸಂದರ್ಶನದ ವೇಳೆ ಅವರೇ ಹೇಳಿರುವಂತೆ "ನನ್ನ ಕತೆಗಳೇ ಮೌಲ್ಯಗಳು" ಎಂಬುದು ಅರ್ಥಪೂರ್ಣವಾದುದಾಗಿದ್ದು, ಅವರ ಕಥಾ ಸಂಕಲನದಲ್ಲಿನ ಕಥೆಗಳು ಮೇಲ್ನೋಟಕ್ಕೆ ಕಥೆಯಂತಿದ್ದರೂ, ಮೌಲ್ಯಯುತ ಸಂದೇಶದಿಂದ ಕೂಡಿರುವುದನ್ನು ಸಂಶೋಧನೆಯಲ್ಲಿ ಕಂಡುಕೊಳ್ಳಲಾಗಿದೆ. ಇಂತಹ ಕಥೆಗಳು ಇಂದಿನ ಯುಗದ ಮಕ್ಕಳಿಗೆ ಅಗತ್ಯವಾಗಿದ್ದು, ಅವರಲ್ಲಿ ಮೌಲ್ಯಗಳ ಅಳವಡಿಕೆಗೆ ಅಭಿವೃದ್ಧಿಗೆ ಅವರ ಸರ್ವತೋಮುಖ ಬೆಳವಣಿಗೆಗೆ ಅನುಕೂಲವಾಗಿದೆ

**ಅಡಿ ಟಿಪ್ಪಣಿ:**

೧. ಎಮ್.ಎಡ್ ಅಧ್ಯಯನ ಸಾಮಗ್ರಿ – ಮೈಸೂರು ವಿಶ್ವವಿದ್ಯಾಲಯ. ೨೦೧೩. ಶಿಕ್ಷಣ ತತ್ವಶಾಸ್ತರ ಮತ್ತು ಸಮಾಜಶಾಸ್ತ್ರ – ಮೌಲ್ಯ ಮೀಮಾಂಸೆ. ಪು–೨೯

೨. ಅದೇ ಪುಟ–೬೬

೩. ಅಂತರ್ ಜಾಲ ಮಾಹಿತಿ. www.kanaja.com ಮಾನವೀಯ ಮೌಲ್ಯಗಳು. ೨೪.೧೦.೨೦೧೪

## ಅನುಬಂಧ

**ಡಾ.ಸುಧಾ ಎನ್ ಮೂರ್ತಿ ಅವರೊಂದಿಗೆ ಸಂದರ್ಶನ**
**ದಿನಾಂಕ:೧೬.೦೬.೨೦೧೫**
**ಸಮಯ: ಬೆಳಗ್ಗೆ ೯ ಘಂಟೆಗೆ**



**೧. ಮಕ್ಕಳ ಕಥೆಗಳ ರಚನೆಗೆ ನಿಮಗೆ ಪ್ರೇರಣೆ ಏನು? ಯಾರು ಪ್ರೇರಿತರು? ಹೇಗೆ?**

ನಾನು ಹಳ್ಳಿಯಲ್ಲಿ ಬೆಳೆದಂತಹವಳು. ಟಿ.ವಿ ಮತ್ಯಾವುದೇ source of enjoyment ಬಹಳ ಕಡಿಮೆಯಿತ್ತು. ವಾರ್ತಾ ಪತ್ರಿಕೆ, ಚಂದ ಮಾಮ ಪತ್ರಿಕೆ ಬಿಟ್ಟರೆ ಇನ್ನಾವುದೇ ಮನರಂಜನ ಮಾಧ್ಯಮವಿರಲಿಲ್ಲ. ಪ್ರತಿ ರಜೆಗೆ ಹಳ್ಳಿಯಲ್ಲಿನ ತಾತ-ಅಜ್ಜಿಯ ಮನೆಗೆ ಹೋಗುತ್ತಿದ್ದೇವು. ಅವರಿಗೆ ಕಥೆಗಳು ಗೊತ್ತಿರುತ್ತಿದ್ದವು. ಪುರಾಣದ ಕಥೆಗಳು, ಜಾನಪದ ಕಥೆಗಳು ಮೊದಲಾದವನ್ನು ಇತಿಹಾಸದ ಮೇಷ್ಟ್ರಾದ ನಮ್ಮ ತಾತ ಮನೋಜ್ಞವಾಗಿ ಹೇಳುವ ಮೂಲಕ ನಮ್ಮನ್ನು ಕಲ್ಪನಾಲೋಕದಲ್ಲಿ ವಿಹರಿಸುವಂತೆ ಮಾಡುತ್ತಿದ್ದರು. ಮಹಾರಾಣಾಪ್ರತಾಪ್ ಮತ್ತು ಚೇತಕ್, ಪದ್ಮಿನಿ ಮತ್ತು ಅವಳ ಸೌಂದರ್ಯ(Padmini and her beuty), ದ್ರೌಪದಿ ವಸ್ತ್ರಾಭರಣ, ಸೀತೆಯನ್ನು ರಾವಣ ಅಪಹರಿಸಿದ್ದು, ಭಕ್ತ ಮಾರ್ಕಂಡೇಯ ಮೊದಲಾದವನ್ನು ಕಥಾರೂಪದಲ್ಲಿ ಕೇಳಿ ನನಗೆ ಕಥೆಯ ಮೇಲೆ ಒಲವು ಮೂಡಿ, ನಾನು ಕಥೆಗಳ ರಚನೆಯಲ್ಲಿ ತೊಡಗಿದೆ.

**೨. ನಿಮ್ಮ ಮಕ್ಕಳ ಕಥೆಗಳನ್ನು ಓದುವಾಗ ನಿಮ್ಮ ಬಾಲ್ಯ ಗೋಚರವಾಗುತ್ತಿತ್ತು. ಅದು ತಮ್ಮ ಕಲ್ಪನೆಯೋ? ವಾಸ್ತವವೋ?**

ಅದು ವಾಸ್ತವಿಕತೆ. ನಾನು ಯಾವಾಗಲೂ ವಾಸ್ತವ ಬರೆಯಲು ಇಚ್ಛಿಸುತ್ತೇನೆ. ನನಗೆ ವಾಸ್ತವದ ಬಗ್ಗೆ ಕಥೆ ಬರೆಯಲು ಬಹಳ ಇಷ್ಟ. ಕಾರಣ ವಾಸ್ತವಕ್ಕೆ ಸಂಬಂಧಿಸಿದ

ಕಥೆಗಳು ಎಲ್ಲರಿಗೂ ಇಷ್ಟವಾಗುವುದು. ಇದರಿಂದ they can identify themselves. Every person can connected with reality. ಕಲ್ಪನೆ ಮಾಡಿ ಬಹಳಷ್ಟನ್ನು ಬರೆಯಬಹುದು. ಆದರೆ ಅದು ನಮ್ಮ ಹೃದಯದೊಂದಿಗೆ ಸ್ಪಂಧಿಸುವುದಿಲ್ಲ. ಯಾವುದು ನಮ್ಮ ಹೃದಯದೊಂದಿಗೆ ಸ್ಪಂದಿಸಿ ಹೊರ ಬರುವುದೋ ಅದೇ **ಮೌಲ್ಯ** ಅದು ಸಾಮಾನ್ಯ ಹೃದಯದ್ದಾಗಿದ್ದರೆ ಸಾಮಾನ್ಯ ಹೃದಯದೊಂದಿಗೆ ಸ್ಪಂದಿಸುತ್ತದೆ. ಹೀಗಾಗಿ ಪ್ರತಿಯೊಬ್ಬ ಸಾಮಾನ್ಯ ಹೃದಯವಂತರಲ್ಲಿ ಪ್ರೀತಿ, ಪ್ರೇಮ, ಅಂತಃಕರಣ, ಎಲ್ಲಕ್ಕಿಂತ ಹೆಚ್ಚು ತ್ಯಾಗ, ಕುಟುಂಬದ ಜವಾಬ್ದಾರಿ ಮೊದಲಾದ ಮೌಲ್ಯಗಳಿರುವುದರಿಂದ ಆದಷ್ಟು ವಾಸ್ತವ ಮತ್ತು ಸತ್ಯಕ್ಕೆ ಹತ್ತಿರವಾದುದನ್ನು, ಆದರ್ಶವಾದುದನ್ನು ಬರೆಯುತ್ತೇನೆ. ಹೀಗಾಗಿ ನನ್ನ ಎಲ್ಲಾ ಕಥೆಗಳು ವಾಸ್ತವಕ್ಕೆ ಸಂಬಂಧಿಸಿದುದಾಗಿದೆ.

**೩. ಮಹಿಳಾ ಕಥೆಗಾರರಲ್ಲಿ ತಾವು ಎಲ್ಲಿ ಭಿನ್ನರಾಗುತ್ತೀರಿ?**

ನನಗೆ ಗೊತ್ತಿಲ್ಲ. ನನ್ನ ತಲೆ, ನನ್ನ ಬಾಯಿ, ನನ್ನ ಹೃದಯ ಒಂದಕ್ಕೊಂದು ಅನುಬಂಧಿತವಾದುದು. ನಾನು ಏನನ್ನು ಯೋಚಿಸುತ್ತೇನೋ ಅದನ್ನೇ ಬಾಯಿಂದ ಹೇಳುತ್ತೇನೆ. ನನ್ನ ಹೃದಯದಲ್ಲಿರುವುದನ್ನು ತಕ್ಷಣ ಯೋಚಿಸುತ್ತೇನೆ. ಅದನ್ನೇ ಬಾಯಿಂದ ಹೇಳುತ್ತೇನೆ. ನಾನು ಹೇಳುವುದೊಂದು, ಮಾಡುವುದೊಂದು ಖಂಡಿತ ಇಲ್ಲ. ನನ್ನ ಮಾತು ಮತ್ತು ಬರಹ ಒಂದಕ್ಕೊಂದು ಸೇರುತ್ತದೆ.

**೪. ನಿಮ್ಮ ಮಕ್ಕಳ ಕಥೆಗಳಲ್ಲಿ ಮೌಲ್ಯಗಳಿವೆ ಎಂದು ಸಂಶೋಧನೆಗೆ ತೊಡಗಿದ್ದೇನೆ. ನಿಮಗೆ ಹಾಗನಿಸುತ್ತದೆಯೇ?**

ಹೌದು. ನನ್ನ ಕಥೆಗಳಲ್ಲಿನ ನೀತಿಗಳೇ ಮೌಲ್ಯಗಳು.

**೫. ಮಕ್ಕಳ ಕಥೆಗಳ ಕೇಂದ್ರಬಿಂದು ಮುಗ್ಧತೆ. ಅದಕ್ಕೆ ಬೌದ್ಧಿಕತೆ ಮುಗ್ಧತೆಯನ್ನು ಮೀಟುತ್ತದೆಯೇ? ಇಲ್ಲ ಮುಗ್ಧತೆ ಬೌಧ್ಧಿಕತೆಯನ್ನು ಮೀಟುತ್ತದೆಯೋ?**

**ನನಗೆ ಬೌದ್ಧಿಕತೆ ಅನ್ನಿಸುತ್ತದೆ. ತಮಗೆ?**

ಇವತ್ತಿನ ದಿನ ನಮ್ಮ ಮುಂದುವರಿದ ಮನಸ್ಸು intellectual brain, innocence ಅನ್ನು focus ಮಾಡುತ್ತಿರುತ್ತದೆ. ಒಂದು ಬೌದ್ಧಿಕತೆ ಮತ್ತೊಂದು ಮುಗ್ದತೆ. ಇವೆರಡು ಯಾವಾಗಲು ಪರ್ಯಾಯವಾದ ಆಯಾಮಗಳು. ಬಹಳ ಬುದ್ಧಿವಂತಿಕೆಯಿಂದ ಮುಗ್ಧತೆ ಸತ್ತು ಹೋಗುತ್ತದೆ. ಉದಾಹರಣೆಗೆ ನಾವೇಕೆ ಮಕ್ಕಳಂತಲ್ಲ ಎಂದು ಕೊಳ್ಳುತ್ತೇವೆ. ನಮ್ಮಲ್ಲಿ ವ್ಯವಹಾರ ಜ್ಞಾನ ಹೆಚ್ಚು. ಇವರಿಂದ ಏನು ಲಾಭ? ಅವರಿಂದ ಏನು ಲಾಭ? ಎಂದು ನಮ್ಮಲ್ಲಿ ಮಕ್ಕಳ ಮುಗ್ಧತೆ ಬರುವುದಿಲ್ಲ. ಆದರೆ

ಮಕ್ಕಳು ಮುಗ್ಧರಾಗಿದ್ದರೂ ಒಳಗೆ ಅವರಲ್ಲಿ ಬುದ್ಧಿವಂತಿಗೆ ಇರುತ್ತದೆ. ಅದು ಮುಗ್ಧವಾದ ಬುದ್ಧಿವಂತಿಕೆ. ಮತ್ತೊಂದು ಹೇಳುತ್ತೇನೆ ನಾನು ಬರೆಯುವಾಗ ಮಗು ಆಗಿ ಬಿಡುತ್ತೇನೆ. ನಾನು ಏನೇ ಬರೆದರೂ ಅದನ್ನು ತಾನು ಅನುಭವಿಸಿ ಬರೆಯುತ್ತೇನೆ. ಆಗ ನನಗೆ ಬರೆಯೋದು ಸುಲಭವಾಗುತ್ತದೆ. ೮/೧೪ ವರ್ಷದ ಹುಡುಗಿಯ ಕಥೆ ಬರೆಯುವಾಗ, ನಾನು ಅದೇ ವಯಸ್ಸಿನವಳಾಗುತ್ತೇನೆ. ಇಲ್ಲವಾದರೆ ನನ್ನಲ್ಲಿ ಕೃತ್ರಿಮತೆ ಬಂದು ಬಿಡುತ್ತದೆ. ಕೃತ್ರಿಮತೆಯಿಂದ ಏನನ್ನು ಬರೆದರು ಅದು ಟೊಳ್ಳಾಗಿ ಬಿಡುತ್ತದೆ. ಇದು ನನಗೆ ಇಷ್ಟವಿಲ್ಲ.

**೬. ಮಕ್ಕಳ ಕಥೆಗಳನ್ನು ಮಕ್ಕಳು ಓದಬೇಕು. ಇಲ್ಲ ಬೇರೆಯವರು ಓದಿ ಹೇಳಬೇಕು. ಇದು ಬಿಟ್ಟು ಬೇರೆ ವಿಧಾನವನ್ನು ನೀವು ಸೂಚಿಸುತ್ತೀರ?**

ಹಳೆಕಾಲದಲ್ಲಿ ಅಜ್ಜಿ ಹೇಳುತ್ತಿದ್ದ ರೀತಿಯಲ್ಲಿ ಕಥೆ ಹೇಳಲು ಪ್ರಾರಂಭಿಸಬೇಕು. ಆದರೆ ದುರದೃಷ್ಟತೆ ಎಂದರೆ ಈಗಿನ ಅಜ್ಜಿಯಂದೀರರಿಗೆ ಸಮಯವೇ ಇಲ್ಲ. Busy ಅಜ್ಜಿಯಂದೀರಾಗಿದ್ದಾರೆ. ನನ್ನ ಮೊಮ್ಮಗಳು ಹೇಳುತ್ತಾಳೆ super busy ajji, regular ajji ಎಂದು. ಏಕೆಂದರೆ ಪ್ರತಿ ೬ ವಾರಕ್ಕೆ ಒಂದು ವಾರ ನಾನು ನನ್ನ ಮೊಮ್ಮಗಳ ಊರಾದ ಇಂಗ್ಲೆಂಡಿಗೆ ಹೋಗುತ್ತೇನೆ. ಅಲ್ಲಿ ಹೋದಾಗ ಪ್ರತಿ ದಿನ ಕಥೆ ಹೇಳುತ್ತೇನೆ.

**ಸಂಶೋಧನಾ ವಿದ್ಯಾರ್ಥಿ** – ಹಾಗಾದರೆ ಹಿಂದೆ ಇದ್ದ ಮೌಖಿಕತೆ ಬರಬೇಕು ಎಂದು ಹೇಳುತ್ತೀರ?

ಹೌದು. ಸಣ್ಣವರಿದ್ದಾಗ ಮೌಖಿಕತೆ best. ಆ ನಂತರ ಓದಿ ತೋರಿಸಬೇಕು ಇಲ್ಲವೇ ಹೇಳಬೇಕು. ಇದರಿಂದ ಭಾಷಾ ಬೆಳವಣಿಗೆ ಹಾಗೂ ಉಳಿಯುವಿಕೆ ಸಾಧ್ಯ. ಇನ್ನೂ ಸ್ವಲ್ಪ ದೊಡ್ಡವರಾದಾಗ ಅಂದರೆ ಓದಿನ ಮೇಲೆ ಹಿಡಿತ ಸಾಧಿಸಿದಾಗ ಓದಲು ಹೇಳಬೇಕು. 3 stage ಮಾಡಬೇಕು. ನಾಲ್ಕನೆಯದು ೧೪–೧೫ ವರ್ಷವಿದ್ದಾಗ ಅವರಲ್ಲಿ ಗ್ರಹಿಸುವ ಶಕ್ತಿ ಬೆಳೆದಿರುತ್ತದೆ. ಹೀಗಾಗಿ ಅವರಿಗೆ ಕಥೆಗಳನ್ನು ಅಭ್ಯಸಿಕೊಂಡು ಓದಿ ಎಂದು ಹೇಳಬೇಕು. ಆದಷ್ಟು ವಿಡಿಯೋ ಗೇಂ, ಕಂಪ್ಯೂಟರ್, ಮೊಬೈಲಿನಿಂದ ದೂರವಿಡಬೇಕು. ಇಲ್ಲವಾದರೆ ಅವರಲ್ಲಿನ ನೈಜ ವಾಸ್ತವ ಲೋಕ ಮೊಟಕಾಗುತ್ತದೆ.

**೭. ನಿಮ್ಮ ಕಥೆಗಳನ್ನು ಓದುವಾಗ ನನ್ನ ಅನುಭಕ್ಕೆ ಕೆಲವು ಮೌಲ್ಯಗಳು ಬರುತ್ತಿದ್ದವು. ಉದಾಹರಣೆಗೆ ಮೋಸಕ್ಕೆ ಮೋಸ ಕಥೆಯಲ್ಲಿ ಒಬ್ಬನ ಮೋಸವನ್ನು ಸುಧಾರಿಸಲು ಮತ್ತೊಬ್ಬ ಮೋಸದ ಹಾದಿಯ ಮೂಲವನ್ನು ಕಂಡುಕೊಂಡ ಬುದ್ಧಿವಂತನು ಎಂದು. ತಮಗೂ ಅದೇ ಮೌಲ್ಯಗಳು ಅನುಭವಕ್ಕೆ ಬಂದು ಕಥೆಗಳನ್ನ ಬರೆದರೇ?**

ಇಲ್ಲ. ಇಬ್ಬರೂ ಮೋಸದ ಹಾದಿಯಲ್ಲಿ ನಡೆದಿದ್ದರಿಂದ ಇಬ್ಬರೂ ಠಕ್ಕರೆ. ಕಾರಣ ಒಬ್ಬರು ಇನ್ನೊಬ್ಬರಿಗೆ ಮೋಸ ಮಾಡುವಾಗ ಯೋಚಿಸಬೇಕು ತಮಗೂ ಮತ್ತೊಬ್ಬರು ಮೋಸ ಮಾಡಬಹುದೆಂದು. ಹೀಗಾಗಿ ಒಬ್ಬರನ್ನು ತಿದ್ದಲೂ ಅವರ ದಾರಿಯನ್ನೇ ಹಿಡಿಯುವ ಬದಲು ನೀತಿ ಮಾರ್ಗದ ಮೂಲಕ ಬೋಧಿಸಬೇಕು ಎನ್ನುವುದು ನನ್ನ ಅಭಿಮತ.

**೮. ನಿಮ್ಮ ಕಥೆಯಲ್ಲಿ ತಾಂತ್ರಿಕತೆಯ ಪ್ರಭಾವ ಎಲ್ಲಾದರೂ ಕಾಣಸಿಗಬಹುದೇ?**

ಬಹಳ ಕಡಿಮೆ. ಪ್ರಜ್ಞಾಪೂರ್ವಕವಾಗಿ ತಡೆಹಿಡಿದಿದ್ದೇನೆ. ಮಕ್ಕಳು ಈ ತಾಂತ್ರಿಕ ಅಂಶದಿಂದ ಎಷ್ಟು ದೂರವಿರುತ್ತಾರೋ ಅಷ್ಟೇ ಅವರಿಗೆ ಒಳ್ಳೆಯದು. ಇದರಿಂದ ಅವರಲ್ಲಿ ಇತರ ಚಟುವಟಿಕೆಗಳ ಬಗೆಗಿನ ಸೃಜನಶೀಲತೆ ವೃದ್ಧಿಯಾಗುತ್ತದೆ. ಇಲ್ಲವಾದರೆ ಈ ತಾಂತ್ರಿಕ ಆವಿಷ್ಕಾರಗಳಾದ ಟಿ.ವಿ, ಕಂಪ್ಯೂಟರ್, ವಿಡಿಯೋ ಗೇಂ ಗಳಲ್ಲೇ ಸಿಲುಕಿ ತುಕ್ಕು ಹಿಡಿದ ಕಬ್ಬಿಣದಂತಾಗುತ್ತಾರೆ. ಸರಳತೆಯನ್ನು ಕಳೆದುಕೊಳ್ಳುತ್ತಾರೆ. ಹೊರ ದೇಶದಲ್ಲಂತೂ, de-adiction camp for computer games ಇದೆ. ಹೀಗಾಗಿ ಮಕ್ಕಳನ್ನು ಆದಷ್ಟು ಇದರಿಂದ ದೂರ ಇಡಬೇಕು. Except education purpose ಬಿಟ್ಟರೆ, ಬೇರೆ ಎಲ್ಲದಕ್ಕೂ ಅದರ ಅವಲಂಬನೆ ತಡೆಯಬೇಕು.

**೯. ಹಾಗಾದರೆ ತಮ್ಮ ಅಷ್ಟೂ ಕಥೆಗಳನ್ನು ಓದಿದ ಮೇಲೆ ಸಾಮಾಜಿಕ ಮೌಲ್ಯಗಳೆಲ್ಲವೂ ಕಾರಣ ಪರಿಣಾಮಗಳ ಕ್ರಿಯಾತ್ಮಕ ಪ್ರಕ್ರಿಯೆಗಳ ಒಳಗೆ ಸೇರುತ್ತವೆಯೇ?**

ಹೌದು ಒಪ್ಪುತ್ತೇನೆ. ಆದರೆ ಮೂಲ ಮೌಲ್ಯಗಳು ಒಳಗೇ ಇರುತ್ತದೆ. ಸ್ವತಂತ್ರ್ಯವಾಗಿರುತ್ತದೆ. ಈಗ ಮೋಸಕ್ಕೆ ಮೋಸ, ಸಮುದ್ರದ ನೀರು ಉಪ್ಪೇಕೆ, ಚಿನ್ನದ ಚಪ್ಪಲಿ ಕಥೆಗಳಲ್ಲಿ ಒಬ್ಬರ ಅನುಕೂಲಕ್ಕೆ ಮತ್ತೊಬ್ಬರು ಅಸೂಯೆಯನ್ನು ಪಡುತ್ತಾರೆ. ಆದರೆ ಅದರಿಂದ ಒಂದು ಕಲಿಕೆಯೂ ನಡೆಯುತ್ತದೆ. ಸಮಾಜದಲ್ಲಿ ಜನರು ಜೀವನೋಪಾಯಕ್ಕೆ ಸಂಬಂಧಿಸಿದಂತೆ ಏನೇನೋ ಮಾಡುತ್ತಾರೆ. ಆದರೆ ಅವರಲ್ಲಿ ಮೂಲ ಮೌಲ್ಯದಲ್ಲಿ ಯಾವುದೇ ಬದಲಾವಣೆಯಾಗುವುದಿಲ್ಲ. ಕೆಲವು ಸದ್ಗುಣಗಳು ಯಾವುದೇ ಜನಾಂಗದಲ್ಲಿ ಯಾವುದೇ ಕಾಲದಲ್ಲಿ ಬದಲಾವಣೆಗೆ ಒಳಪಡದೆ ಇರುವಂತಹದ್ದೇ ನಿಜವಾದ ಗಟ್ಟಿ ಮೌಲ್ಯಗಳು.

**೧೦ ಕೊನೆಯದಾಗಿ ನಿಮ್ಮ ಕಥೆಗಳಲ್ಲಿ ಪಂಚತಂತ್ರದ ಮೌಲ್ಯಗಳ ಪ್ರಭಾವ ಕಾಣಿಸುತ್ತದೆ. ನಿಮಗೆ ಪಂಚತಂತ್ರದ ಪ್ರಭಾವ ಇದೆಯೇ?**

ಹೌದು ಇದೆ. ಪಂಚತಂತ್ರದ ಕಥೆಗಳು ನನ್ನ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದವು.





(ಎಡದಿಂದ ಬಲಕ್ಕೆ –ಡಾ.ಸುಧಾ ಎನ್ ಮೂರ್ತಿ, ಡಾ.ಶೀಲಾದೇವಿ ಎಸ್ ಮಳೀಮಠ, ಸಂಶೋಧನಾ ವಿದ್ಯಾರ್ಥಿ ಶ್ರೀಮತಿ ಶಬೀನಾ)

(**ಸೂಚನೆ:** ಮಾರ್ಗದರ್ಶಕರೊಡನೆ ಪ್ರಶ್ನಾವಳಿಗಳನ್ನು ಸಿದ್ದಪಡಿಸಲಾಗಿದ್ದು, ಸಂದರ್ಶನವನ್ನು ಕೈಗೊಳ್ಳಲಾಯಿತು)

## ಸಂದರ್ಶನಕ್ಕೆ (An Interview) ಅನುಮತಿ ಕೋರಿಕೆ.

ಮಾನ್ಯರೆ,

ನಾನು ಶಬೀನಾ ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ೨೦೧೫-೧೬ ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿಯಾಗಿದ್ದು, ಡಾ.ಶೀಲಾದೇವಿ ಎಸ್ ಮಳಿಮಠ್ ರವರ ಮಾರ್ಗದರ್ಶನದಲ್ಲಿ 'ಮಕ್ಕಳ ಕಥಾ ಸಾಹಿತ್ಯ - ಸಾಮಾಜಿಕ ಮೌಲ್ಯಗಳು' ಎಂಬ ವಿಷಯದ ಮೇಲೆ ಅಧ್ಯಯನವನ್ನು ನಡೆಸುತ್ತಿದ್ದೇನೆ. ನನ್ನ ಅಧ್ಯಯನ ವಿಷಯಕ್ಕೆ ಸಹಕಾರಿಯಾಗಿ ಪೂರಕವಾದ ಮಾಹಿತಿಯನ್ನು ಪಡೆಯಲು ತಮ್ಮನ್ನು ೧೦-೧೫ ನಿಮಿಷಗಳ ಕಾಲ ಸಂದರ್ಶನ ಮಾಡಲು ತಾವು ಸಮ್ಮತಿಸಿ, ಸಂದರ್ಶನಕ್ಕೆ ದಿನಾಂಕ ಮತ್ತು ಸಮಯವನ್ನು ನೀಡಬೇಕಾಗಿ ಈ ಮೂಲಕ ವಿನಂತಿಸಿಕೊಳ್ಳುತ್ತೇನೆ.

ಧನ್ಯವಾದಗಳೊಂದಿಗೆ,

ಇತಿ ತಮ್ಮ ವಿಶ್ವಾಸಿ
ಶಬೀನಾ

**Foundation <foundation@infosys.com>** Jun 11 (1 day ago)

to me

Dear Shabeena,

Thank you for your email. You can meet Mrs. Murty on **June 16th at 9.30 am at our office.** I am giving the address below :

Infosys Foundation
Infosys Tower
# 27, J.P. Nagar 3rd Phase ,
Bannerghatta Main Road ,
Opp; Jayadeva Cardiologist Hospital
Bangalore 560076.
Phone : 080 26587422
Kindly confirm.With regards, Leena
**From:** shabeena syad ali Shabeena [mailto:shabeenasa@gmail.com]
**Sent:** Wednesday, June 10, 2015 10:22 AM
**To:** Sudha Murty
**Subject:** ಸಂದರ್ಶನಕ್ಕೆ (An Interview) ಅನುಮತಿ ಕೋರಿಕೆ.

**shabeena syad ali Shabeena <shabeenasa@gmail.com>** 9:49 PM (52 minutes ago)

to Foundation

Thank you for your permission mam.
I will be there in time.

INFOSYS FOUNDATION
Sudha Murty
CHAIRPERSON
16/6/15



## ಪರಾಮರ್ಶನ ಗ್ರಂಥಗಳು


- ಕನ್ನಡ ವಿಶ್ವಕೋಶ ಸಂಪುಟ ಮೂರು – ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೯೧
- ದಶಕದ ಮಕ್ಕಳ ಸಾಹಿತ್ಯ – ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಕೆ.ರವೀಂದ್ರನಾಥ, ಡಾ.ವೀರೇಶ ಬಡಿಗೇರ, ಪ್ರಕಾಶಕರು : ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೧–೨೦೦೦
- ಕನ್ನಡ ಸಾಹಿತ್ಯ ಕೋಶ – ರಾಜಪ್ಪ ದಳವಾಯಿ.
- Values and education in Independent India – G.N.Kaul. The associated publishers. 1993
- Human values in education – N.L.Gupta. published and printed by Ashok Kumr Mittal, concept publishing company, New Delhi. 2000
- Human values – N.C.E.R.T
- ಶತಮಾನದ ಮಕ್ಕಳ ಸಾಹಿತ್ಯ – ಸಂ.ಎನ್.ಎಸ್ ರಘುನಾಥ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೦೧
- ಮಕ್ಕಳ ಸಾಹಿತ್ಯ ಪುಸ್ತಕ – ಆನಂದ ಕಂದ – ಲೇಖಕರು – ದು.ನಿಂ.ಬೆಳಗಲಿ, ಪ್ರಕಾಶಕರು: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಡಿ.ವಿ.ಜಿ ಅವರ ಮಂಕುತಿಮ್ಮನ ಕಗ್ಗ–ವಿದ್ಯಾವಾಚಸ್ಪತಿ ಕವಿತಾಕೃಷ್ಣ, ತನು–ಮನು ಪ್ರಕಾಶನ.೨೦೦೩.
- ಕನ್ನಡ ವಿಶ್ವಕೋಶ ಸಿ.ಡಿ – ಮೈಸೂರು ವಿಶ್ವವಿದ್ಯಾಲಯ. ತಯಾರಕರು– ಕನ್ನಡ ಗಣಕ ಪರಿಷತ್ತು. ೨೦೦೬.
- ಮಕ್ಕಳ ಸಾಹಿತ್ಯದ ನೆಲೆ–ಬೆಲೆ – ಎನ್.ವಿ.ಶ್ರೀನಿವಾಸರಾವ್. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೨೦೦೬
- ಮಕ್ಕಳೊಡನೆ ಮಾತುಕತೆ – ಡಾ.ಕಮಲಾ ಹಂಪನ. ಪ್ರಕಾಶಕರ: ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು. ೨೦೦೬
- ಮಕ್ಕಳಿಗಾಗಿ ನನ್ನ ಮೆಚ್ಚಿನ ಕತೆಗಳು – ಡಾ.ಸುಧಾ ಎನ್ ಮೂರ್ತಿ, ಪ್ರಕಾಶಕರು: ಸ್ವಪ್ನ ಬುಕ್ ಹೌಸ್. ೨೦೦೬

➢ ಸುಕೇಶಿನಿ ಮತ್ತು ಇತರ ಮಕ್ಕಳ ಕಥೆಗಳು – ಡಾ.ಸುಧಾ ಎನ್ ಮೂರ್ತಿ, ಪ್ರಕಾಶಕರು: ಸ್ವಪ್ನ ಬುಕ್ ಹೌಸ್. ೨೦೦೮

➢ ಸಂಶೋಧನಾ ಸ್ವರೂಪ – ಡಾ.ಬಿ.ವಿ.ಶಿರೂರ್. ನಿವೃತ್ತ ಕನ್ನಡ ಪ್ರಾಧ್ಯಾಪಕರು, ಡಾ.ಆರ್.ಸಿ.ಹಿರೇಮಠ್ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪ್ರಕಾಶಕರು: ಅನ್ನಪೂರ್ಣ ಪ್ರಕಾಶನ, ಧಾರವಾಡ. ೨೦೦೮

➢ ಸರ್ವಜ್ಞ ವಚನ ಸಂಪದ. ಮಾಗಡಿ ರಂಗನರಸಿಂಯ್ಯ. ವಿಜಯವಾಹಿನಿ ಪಬ್ಲಿಕೇಷನ್ಸ್ .೨೦೦೭.

➢ ಅಜ್ಜಿ ಹೇಳಿದ ಕಥೆಗಳು – ಡಾ.ಅನಸೂಯಾದೇವಿ. ಪ್ರಕಾಶಕರು: ದೇಸಿ ಪುಸ್ತಕ, ಬೆಂಗಳೂರು. ೨೦೧೨

➢ ಎಮ್.ಎಡ್ ಅಧ್ಯಯನ ಸಾಮಗ್ರಿ – ಮೈಸೂರು ವಿಶ್ವವಿದ್ಯಾಲಯ. ೨೦೧೩.

➢ ಅಬ್ಬಲಕ್ಕ ಅಜ್ಜಿ ಮನೆಗೆ ಹೋದ ಕತೆಗಳು – ಡಾ.ವೈದೇಹಿ. ಜಡಭಾರತ ಪ್ರಕಾಶನ, ಧಾರವಾಡ.೨೦೧೪

➢ ಆನಂದ ಪಾಟೀಲರ ಮಕ್ಕಳ ಸಾಹಿತ್ಯ: ಒಂದು ಪರಿಚಯ – ಆರ್.ವಿ.ಭಂಡಾರಿ. ಅಂತರಜಾಲಕ್ಕೆ ಕಳುಹಿಸಿದ ಮಾಹಿತಿ. ೧೦.೦೭.೨೦೧೪

➢ ಮಕ್ಕಳ ಸಾಹಿತ್ಯ ವಿಕಿ ಪೆಡಿಯ. ೨೪.೧೦.೨೦೧೪

➢ ಮಕ್ಕಳಿಗಾಗಿ ಸಾಹಿತ್ಯ ರಚಿಸಲಿ – ಪ್ರಜಾವಾಣಿ ವಾರ್ತೆ. ೧೭.೧೧.೨೦೧೪

➢ ಮಕ್ಕಳ ಸಾಹಿತ್ಯದ ಬಗ್ಗೆ ತಿರಸ್ಕಾರ ಬೇಡ – ಕನ್ನಡ ಪ್ರಭ ವಾರ್ತೆ, ಧಾರವಾಡ. ೩೧.೧೨.೨೦೧೪.

➢ ಮಕ್ಕಳ ಸಾಹಿತ್ಯದ ರೀತಿ ನೀತಿಗಳು – ಅಂತರ್ ಜಾಲ ಮಾಹಿತಿ. ೩೧.೧೨.೨೦೧೪

➢ ಸಾಮಾಜಿಕ ಮೌಲ್ಯಗಳು ಅಂದು ಇಂದು – ಡಾ.ಹೆಚ್.ಎಚ್ ಮರುಳಸಿದ್ದಯ್ಯ.

➢ ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ–ಡಾ.ಎನ್.ಕೆ.ಕೋದಂಡರಾಮ. ರೂಪ ಪ್ರಕಾಶನ.

➢ ಸಂಕ್ಷಿಪ್ತ ಕನ್ನಡ ನಿಘಂಟು – ಕನ್ನಡ ಸಾಹಿತ್ಯ ಪರಿಷತ್ತು.



